# ವೈಧವ್ಯ - ಒಂದು ಸಾಮಾಜಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ಜ್ಯೋತ್ಸ್ನಾ ಚಂದ್ರಕಾಂತ

ಮಾರ್ಗದರ್ಶಕರು
ಡಾ. ಎಚ್.ಎಸ್.ಶ್ರೀಮತಿ
ಪ್ರಾಧ್ಯಾಪಕರು






ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೩

# ವೈಧವ್ಯ - ಒಂದು ಸಾಮಾಜಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ಜ್ಯೋತ್ಸ್ನ ಚಂದ್ರಕಾಂತ




ಮಾರ್ಗದರ್ಶಕರು
ಡಾ. ಎಚ್.ಎಸ್.ಶ್ರೀಮತಿ
ಪ್ರಾಧ್ಯಾಪಕರು



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೩

# ಪ್ರಮಾಣ ಪತ್ರ

ವೈಧವ್ಯ - ಒಂದು ಸಾಮಾಜಿಕ ಅಧ್ಯಯನ ಎಂಬ ಶೀರ್ಷಿಕೆಯ ನಿಬಂಧವನ್ನು ಡಾ. ಎಚ್.ಎಸ್.ಶ್ರೀಮತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Jkairam.

ಜ್ಯೋತ್ಸ್ನಾ ಚಂದ್ರಕಾಂತ
ಎಂ.ಫಿಲ್.ವಿದ್ಯಾರ್ಥಿನಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 30.04.2003

# ಮಾರ್ಗದರ್ಶಕರ ಪ್ರಮಾಣಪತ್ರ

**ವೈಧವ್ಯ - ಒಂದು ಸಾಮಾಜಿಕ ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಕುಮಾರಿ ಜ್ಯೋತ್ಸ್ನಾ ಚಂದ್ರಕಾಂತ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 30.4.03

ಡಾ. ಎಚ್.ಎಸ್. ಶ್ರೀಮತಿ
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

# ಪ್ರಸ್ತಾವನೆ

ಮಾನವರು ಅಲೆಮಾರಿ ಜೀವನವನ್ನು ಬಿಟ್ಟು ಒಂದು ಕಡೆ ನೆಲೆನಿಂತು ಬಾಳಲು ಪ್ರಾರಂಭಿಸಿದನು ಆಗ ಒಂದು ವ್ಯವಸ್ಥಿತವಾದ ಬದುಕು ನಡೆಸಲು ಸಾಧ್ಯವಾಯಿತು. ಕೃಷಿ ಮತ್ತು ಶೋಧನೆಗಳನ್ನು ಮಾಡುವುದು ಯಾವಾಗ ಪ್ರಾರಂಭಿಸಿದರು ಅಂದಿನಿಂದ ಪರಸ್ಪರ ಸಹಕಾರ ವಿನಿಮಯದಿಂದ ನಿಸರ್ಗದಲ್ಲಿ ಸುಖಮಯ ಜೀವನ ನಡೆಸಲು ಒಂದು ವ್ಯವಸ್ಥೆಯನ್ನು ಮಾಡಿಕೊಂಡರು. ಆದರೆ ಆ ವ್ಯವಸ್ಥೆಯೂ ಕ್ರಮೇಣವಾಗಿ ಪ್ರಬಲರು ದುರ್ಬಲರ ಶ್ರಮವನ್ನು ತಮ್ಮ ಅಗತ್ಯಕ್ಕೋಸ್ಕರ ಬಳಸಲಾಯಿತು. ಮಹಿಳೆಯು ಮಕ್ಕಳಲಾಲನೆ ಪಾಲನೆಯನ್ನು ಮಾಡುತ್ತ ಕೃಷಿ ಕ್ಷೇತ್ರದಲ್ಲಿ ಭಾಗವಹಿಸುತ್ತಿದ್ದಳು. ಕೃಷಿ ಬೆಳೆ ಬೆಳೆಯುವವರೆಗೆ ಆಹಾರ ಅಗತ್ಯವಿರುವುದರಿಂದ ಪುರುಷನಾದವನುಲು ಬೇಟೆಯಾಡಲು ಹೊರಗೆ ಹೋಗುತ್ತಿದ್ದನು. ಇದರಿಂದ ದುಡಿದು ತರುವವನು ಒಬ್ಬನು ಕುಳಿತು ತಿನ್ನುವವರು ನಾಲ್ಕು ಜನ ಆದರು ಆಗ ಪುರುಷನಿಗೆ ಆಹಾರ ತರುವುದು ಸಹ ಸಂಪಾದನೆಯಾಯಿತು. ಸಹಜವಾಗಿ ಸಂಪಾದನೆಯನ್ನು ಯಾರು ಮಾಡುವರು ಅವರು ಉಳಿದವರ ಮೇಲೆ ನಿಯಂತ್ರಣವನ್ನು ಹೇರಲು ಪ್ರಯತ್ನಿಸಿ ನಿಧಾನವಾಗಿ ಆಹಾರವನ್ನು ತರುವುದು ಬಂಡವಾಳ ಸಂಪಾದನೆ ಎನ್ನುವ ವ್ಯಾಖ್ಯಾನ ಪಡೆದುಕೊಂಡಿತು. ಆಹಾರ ತರುವುದು ಪುರುಷನ ಕೆಲಸವಾದರೆ ಅದರ ಎಲ್ಲ ಮುಂದಿನ ಕೆಲಸಗಳು ಮಹಿಳೆಯು ಮಾಡುತ್ತಿದ್ದಳು. ಆಹಾರ ಬೆಯಿಸುವುದು. ಮಕ್ಕಳನ್ನು ನೋಡಿಕೊಳ್ಳುವುದು, ಮನೆಕೆಲಸ ಮಾಡುವುದು ಇವೆಲ್ಲವೂ ಮಹಿಳೆ ಮಾಡುತ್ತಿದ್ದಳು ಕಣ್ಣಿಗೆ ಕಾಣುವ ಸಂಪಾದನೆಯಾಗಿರಲಿಲ್ಲ ಮನೆಯಲ್ಲಿ ಮಹಿಳೆಯು ಎಷ್ಟು ಶ್ರಮ ಪಟ್ಟರು ಸಹ ಅದು ಪುರುಷನ ಕಣ್ಣಿಗೆ ಕಾಣಲೇ ಇಲ್ಲ ನಾನು ಆಹಾರ ತರುವುದು ಮಾತ್ರ ತನ್ನ ಶ್ರಮದ ಕೆಲಸ ಎಂದುಕೊಂಡನು. ಯಾರ ಸಂಪಾದನೆ ಕಣ್ಣಿಗೆ ಕಾಣಿಸುತ್ತೆ ಅವರು ಯಜಮಾನರಾಗ ತೊಡಗಿದರು ಯಾರ ಸಂಪಾದನೆಯ ಶ್ರಮ ಕಣ್ಣಿಗೆ ಕಾಣುವುದಿಲ್ಲ ಅವರು ಸೇವಕರಾಗತೊಡಗಿದರು. ಇದು ಸ್ತ್ರೀ ಪುರುಷರ ಜೀವನದಲ್ಲಿ ಬಹಳ ಮುಖ್ಯವಾದ ವ್ಯತ್ಯಾಸ ಆಗಿದೆ. ಸಂಪಾದನೆಯ ಕ್ಷೇತ್ರ ಗಂಡಸಿನದಾದರೆ ಸೇವೆಯ ಕ್ಷೇತ್ರ ಮಹಿಳೆಯದಾಯಿತು. ಸೇವೆಯ ಕ್ಷೇತ್ರ ಯಾವಾಗ ಆಯಿತೆಂದರೆ ಮಹಿಳೆಯ ಕೆಲಸಕ್ಕೆ ಬೆಲೆ ಸಿಗದೆ ಸಂಪಾದನೆಯನ್ನು ಅಧಿಕಾರವಾಗಿ ಚಲಾಯಿಸಲು ಪುರುಷನು ಪ್ರಾರಂಭಿಸಿದನು. ಕೃಷಿ ಕ್ಷೇತ್ರದಲ್ಲಿ ಮಹಿಳೆಯು ಕಳೆಕೀಳುವುದು, ನಾಟಿಮಾಡುವುದು ಮಾಡಿದರೆ ಪುರುಷನಾದವನು ರಾಶಿ ಮಾಡುವುದು ಬಂದ ಬೆಳೆಯನ್ನು ಮಾರುಕಟ್ಟೆಗೆ ಸಾಗಿಸುವುದು ಮಾಡಿದನು ಈ ರೀತಿ ಸಂಪಾದನೆಯ ಮೇಲೆ ತನ್ನ ಅಧಿಕಾರವನ್ನು ಚಲಾಯಿಸಲು ಪ್ರಾರಂಭಿಸಿದನು. ಪುರುಷನು ತನ್ನ ಎಲ್ಲ ಶ್ರಮವನ್ನು

ಸಂಪಾದನೆಯನ್ನಾಗಿ ಇಟ್ಟುಕೊಂಡು ಮಹಿಳೆಯ ಎಲ್ಲ ಶ್ರಮವನ್ನು ಸೇವೆಯಾಗಿ ಕೊಟ್ಟು ಬಿಡುವಂತೆ ಮಾಡಿದ. ಮನೆಕೆಲಸದ ಜೊತೆಗೆ ಮಕ್ಕಳನ್ನು ಸಾಕುವ ಭಾವನ ಜಗತ್ತಿನ ಬಂಧನಗಳಿಗೆ ಸಿಕ್ಕಿ ಬಿಟ್ಟಳು. ಈ ರೀತಿಯಾಗಿ ಮಹಿಳೆಯ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸುವುದು ಸುಲಭವೆಂದು ಅರಿತುಕೊಂಡನು. ಯಾರು ಶ್ರೇಷ್ಠ ಯಾರು ಕನಿಷ್ಠ ಎಂದು ಅವರ ಪ್ರಾಬಲ್ಯದ ಮೇಲೆ ಲಿಂಗತಾರತಮ್ಯದಲ್ಲಿ ಘರ್ಷಣೆಗಳಾದವು. ಸ್ತ್ರೀಯು ಭಾವನಾಲೋಕದ ನಿಯಂತ್ರಣದಲ್ಲಿ ಸಿಲುಕಿ ಹಾಕಿಕೊಂಡು ಕ್ರಮೇಣವಾಗಿ ದುರ್ಬಲಳಾದಳು. ಪುರುಷನು ಆಕೆಯನ್ನು ಸಂಪೂರ್ಣವಾಗಿ ತನ್ನ ಹತೋಟಿಯಲ್ಲಿ ಇಡಬೇಕಾದರೆ ಹೆಂಗಸಿನ ಲೈಂಗಿಕತೆಯ ಮೇಲೆ ತನ್ನ ಅಧಿಕಾರವನ್ನು ಚಲಾಯಿಸಲು ಪ್ರಾರಂಭಿಸಿದನು. ತಾನಲ್ಲದೆ ಈ ದೇಹವನ್ನು ಇನ್ನೊಬ್ಬರು ಬಳಸಬಾರದು ಎನ್ನುವ ನಿಯಮವನ್ನು ಮಾಡಿ ಆ ಹೆಣ್ಣನ್ನು ಸಂಪೂರ್ಣವಾಗಿ ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡನು. ಇದೆ ಮುಂದೆ ಮದುವೆ ಎನ್ನುವ ವ್ಯವಸ್ಥೆಯಾಯಿತು. ಮದುವೆ ಎಂದರೆ ಗಂಡಸು ಹೆಣ್ಣಿನ ದೇಹದ ಮೇಲೆ ನಿಯಂತ್ರಣ ಸಾಧಿಸುವವು ಇದು ನನ್ನ ಅಧಿಕಾರ ಇದು ನನ್ನ ಆಸ್ತಿ ಎಂದು ಮದುವೆಯ ಮೂಲಕ ಗಂಡು-ಹೆಣ್ಣನ್ನು ಗುರುತಿಸಿದನು ಹೊರತಾಗಿ ಮಹಿಳೆಯಿಂದ ಪುರುಷನಿಗೆ ಗುರುತಿಸಲಾಗಲಿಲ್ಲ. ಹೀಗೆ ಪುರುಷನು ಮಹಿಳೆಯ ಮೇಲೆ ಹಂತಹಂತವಾಗಿ ಅಧಿಕಾರವನ್ನು ಚಲಾಯಿಸಲು ಪ್ರಾರಂಭಿಸಿದನು. ಅವಳ ಲೈಂಗಿಕತೆಯ ಮೇಲೆ ನಿಯಂತ್ರಣವನ್ನು ಸಾಧಿಸಿದ ಮೇಲೆ ನಿಧಾನವಾಗಿ ಸಂತಾನದ ಮೇಲೂ ಕೂಡ ತನ್ನ ನಿಯಂತ್ರಣ ಹೇರಲು ಪ್ರಾರಂಭಿಸಿದನು. ಒಂಬತ್ತು ತಿಂಗಳು ಹೆತ್ತು ಹೊತ್ತು ಸಾಕಿದ ಮಗುವನ್ನು ಸ್ವತಂತ್ರವಾಗಿ ನಡೆಯುವ ಹಾಗೆ ಆದ ಮೇಲೆ ಆ ಮಗುವಿನ ಮೇಲೆ ವಂಶ ಎನ್ನುವ ಹೆಸರಿನಲ್ಲಿ ಸಂತಾನದ ಮೇಲೂ ನಿಯಂತ್ರಣ ಸಾಧಿಸಿದ ತನ್ನ ಹಾಗೆ ಗಂಡಾಗಿ ಹುಟ್ಟಿದ ಮಕ್ಕಳನ್ನು ತನ್ನ ಆಸ್ತಿ ಎಂದು ತಿಳಿದು ತನ್ನ ಮನೆಯಲ್ಲಿಯೇ ಇಟ್ಟುಕೊಂಡನು. ಹೆಣ್ಣುಮಕ್ಕಳಿಗೆ ವಿವಾಹದ ಮೂಲಕ ಬೇರೆ ಕಡೆ ರವಾನಿಸಿದ. ಈ ರೀತಿಯಾಗಿ ಅವಳ ಲೈಂಗಿಕತೆಯು ಅವಳದಲ್ಲ, ಅವಳ ಮಕ್ಕಳು ಅವಳದಲ್ಲ, ಅವಳು ಸಂಪೂರ್ಣವಾಗಿ ಗಂಡಸಿನ ನಿಯಂತ್ರಣದಲ್ಲಿ ಸಿಲುಕಿ ಹಾಕಿಕೊಳ್ಳುವ ಹಾಗಾಯಿತು. ಹೀಗಾಗಿ ಪುರುಷನು ಹೇಳಿದ ರೀತಿಯಲ್ಲಿಯೇ ಮಹಿಳೆಯು ಬದುಕಬೇಕಾಯಿತು. ಅವಳ ಅಸಹಾಯಕತೆಯನ್ನು ತನ್ನ ಅಧಿಕಾರವನ್ನು ಇಟ್ಟುಕೊಂಡು ತನ್ನ ಸುಖ ಸಂತೋಷಗಳಿಗೆ ಅವಳನ್ನು ದುಡಿಸಿಕೊಳ್ಳಲು ಪ್ರಾರಂಭಿಸಿದ. ಮಹಿಳೆಯ ಮೇಲೆ ತನ್ನ ಸಂಪೂರ್ಣ ಅಧಿಕಾರವನ್ನು ಚಲಾಯಿಸಲು ವಿವಾಹ ಎನ್ನುವ ಸಂಸ್ಥೆಯನ್ನು ಹುಟ್ಟುಹಾಕಿದನು. ತನ್ನ ಸಂತಾನದ ಮೇಲೆ ನಿಯಂತ್ರಣವನ್ನು ಸಾಧಿಸಲು ಕುಟುಂಬ ಎನ್ನುವ ಸಂಸ್ಥೆಯನ್ನು ಸ್ಥಾಪಿಸಿದನು.

**ಕುಟುಂಬ**

ಪುರುಷನು ಮಹಿಳೆಯ ಮೇಲೆ ಮತ್ತು ತನ್ನ ಸಂತಾನದ ಮೇಲೆ ಅಧಿಕಾರವನ್ನು ಚಲಾಯಿಸಲು ಕುಟುಂಬವನ್ನು ಸ್ಥಾಪಿಸಿದನು. ಕುಟುಂಬ ಸ್ಥಾಪನೆಯ ಮೂಲಕ ಒಬ್ಬ ಪುರುಷನಿಗೆ ಒಬ್ಬಳೆ ಮಹಿಳೆಯು

ತನ್ನ ಲೈಂಗಿಕ ಜೀವನವನ್ನು ನಡೆಸುವಂತಾಯಿತು. ಸಂತಾನೋತ್ಪತ್ತಿ, ಕುಟುಂಬದ ಸದಸ್ಯರ ಪೋಷಣೆ, ಸಮಾಜದಲ್ಲಿ ಕುಟುಂಬದ ಸದಸ್ಯರ ಸ್ಥಾನ ನಿರೂಪಿಸುವುದು ಮತ್ತು ಸಾಮಾಜೀಕರಣ ಅಥವಾ ಸಮಾಜಕ್ಕೆ ಹೊಂದಿಕೊಳ್ಳುವುದು ಇವು ಕುಟುಂಬದ ಮುಖ್ಯಕಾರಣಗಳಾಗಿವೆ. ಮಕ್ಕಳ ಪಾಲನೆ ಪೋಷಣೆಗೆ ಗಂಡ ಹೆಂಡಿರ ಸಹಕಾರ ಬಹಳ ಅವಶ್ಯಕವಾಗಿದೆ.

ಮಾನವರಿಗೆ ಲೈಂಗಿಕ ಬಯಕೆಯು ಸ್ವಾಭಾವಿಕವಾದುದು ಮಾನವನಿಗೆ ಸ್ಥಿರವಾದ ಲೈಂಗಿಕ ತೃಪ್ತಿಯನ್ನು ಕುಟುಂಬವು ದೊರಕಿಸಿಕೊಡುತ್ತದೆ. ಮಾನವಕುಲವು ನಿರಂತರವಾಗಿ ಸಾಗಬೇಕಾದರೆ ಸಂತಾನೋತ್ಪತ್ತಿಯು ತುಂಬಾ ಅಗತ್ಯವಾಗಿದೆ. ಅದುದರಿಂದಲೇ ಸಂತಾನೋತ್ಪತ್ತಿ ಕುಟುಂಬದ ಮೂಲಕವೇ ಆಗಬೇಕಾದ ಮುಖ್ಯಕಾರ್ಯವಾಗಿದೆ. ಯಾವುದೇ ಸಮಾಜದಲ್ಲಿಯೇ ಆಗಲಿ ಕುಟುಂಬದ ಚೌಕಟ್ಟಿನೊಳಗೆ ಜನಿಸಿದ ಮಕ್ಕಳಿಗೆ ಇರುವ ಮನ್ನಣೆ ಕುಟುಂಬದ ಹೊರಗೆ ವಿವಾಹ ಬಂಧನವಿಲ್ಲದೆ ಜನಿಸಿದ ಶಿಶುಗಳಿಗೆ ಇರುವುದಿಲ್ಲ. ಆದುದರಿಂದಲೇ ಸಂತಾನೋತ್ಪತ್ತಿಯು ಕುಟುಂಬದ ಪ್ರಮುಖ ಕಾರ್ಯವಾಗಿದೆ. ಮನುಷ್ಯನಿಗೆ ಮಾನಸಿಕವಾಗಿ ಹಲವಾರು ಅಗತ್ಯಗಳಿರುತ್ತವೆ. ಸ್ನೇಹ, ಪ್ರೀತಿ ಮತ್ತು ಅನುಕಂಪಗಳನ್ನು ತೋರಿ, ಪರಸ್ಪರ ಸುಖದುಃಖಗಳಲ್ಲಿ ಪಾಲುಗೊಳ್ಳುವ ಸ್ವಭಾವ ಎಲ್ಲ ಮನುಷ್ಯರಲ್ಲಿಯೂ ಇದೆ. ಕುಟುಂಬವು ಇವುಗಳ ಪೂರೈಕೆಯಲ್ಲಿ ಮುಖ್ಯಪಾತ್ರವಹಿಸುತ್ತದೆ. ಮನೆಯು ಗಂಡ, ಹೆಂಡತಿ ಮತ್ತು ಮಕ್ಕಳು ಬಾಳುವ ನೆಲೆಯಾಗಿದೆ. ಜೀವನದಲ್ಲಿ ನೆಮ್ಮದಿ ದೊರೆಯುವುದು ಕುಟುಂಬದಲ್ಲಿಯೆ. ವಿವಾಹ ಪದ್ಧತಿಯ ಅಧಾರ ಮೇಲೆ ಕುಟುಂಬದ ರೂಪವನ್ನು ನಿಶ್ಚಯಿಸಬಹುದಾಗಿದೆ. ಕುಟುಂಬಗಳಲ್ಲಿ ಏಕಪತ್ನಿ ಕುಟುಂಬ ಮತ್ತು ಬಹುಪತ್ನಿಕುಟುಂಬ ಎಂದು ಎರಡು ವಿಧಗಳಿವೆ. ವಂಶಾವಳಿಯನ್ನು ಗುರುತಿಸುವ ವಿಧಾನ ಕುಟುಂಬದ ಯಜಮಾನ ಮತ್ತು ದಂಪತಿಗಳ ಇರುವಿಕೆಯನ್ನು ಆಧಾರವಾಗಿಟ್ಟುಕೊಂಡು ಕುಟುಂಬಗಳನ್ನು ಮಾತೃಪ್ರಧಾನ ಕುಟುಂಬ ಮತ್ತು ಪಿತೃ ಪ್ರಧಾನ ಕುಟುಂಬ ಎಂದು ವರ್ಗೀಕರಿಸಲಾಗಿದೆ.

### ಪಿತೃಪ್ರಧಾನ ಕುಟುಂಬ

ಮಾನವನು ಮೊದಲು ಅಲೆಮಾರಿ ಜೀವನವನ್ನು ನಡೆಸುವ ಸಂದರ್ಭದಲ್ಲಿ ಮಗುವಿನ ತಾಯಿಯಾರೆಂದು ಗುರಿತಿಸಬಹುದಿತ್ತು ಆದರೆ ತಂದೆ ಯಾರೆಂದು ಗುರುತಿಸುವುದು ಬಹಳ ಕಷ್ಟಕರವಾಗಿತ್ತು. ಸಮಾಜದಲ್ಲಿ ಕುಟುಂಬ ವ್ಯವಸ್ಥೆಯು ಯಾವಾಗ ಜಾರಿಗೆ ಬಂದಿತು ಆಗಲು ಸಹ ಮಗುವಿನ ತಂದೆಯನ್ನು ಗುರುತಿಸುವುದು ಸಾಧ್ಯವಿರಲಿಲ್ಲ. ಕಾರಣ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯು ಜಾರಿಯಲ್ಲಿತ್ತು. ಬರುಬರುತ್ತಾ ಪುರುಷನು ಎಲ್ಲ ಅಧಿಕಾರವನ್ನು ತಾನು ಪಡೆಯುತ್ತಾ ಬಂದು ಸ್ತ್ರೀಯ ಮೇಲೆ ಶೋಷಿಸಲು ಪ್ರಾರಂಭಿಸಿ ಕುಟುಂಬದ ಮೇಲೆ ತನ್ನ ನಿಯಂತ್ರಣ ಹೇರಿದನು. ಆಗಿನಿಂದ ಮಾತೃ ಪ್ರಧಾನ ಕುಟುಂಬದಿಂದ ಪಿತೃಪ್ರಧಾನ ಕುಟುಂಬವು ಜಾರಿಗೆ ಬಂದಿದೆ. ಈ ರೀತಿ ಮಾತೃ ಪ್ರಧಾನ ಕುಟುಂಬ

ಹೋಗಿ ಪಿತೃಪ್ರಧಾನ ಕುಟುಂಬವು ಜಾರಿಗೆ ಬಂದ ನಂತರ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯ ಮೂಲಕ ಹುಟ್ಟಿದ ಮಗುವಿನ ತಂದೆಯನ್ನು ಗುರುತಿಸುವುದು ಸಾಧ್ಯವಾಯಿತು. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ತಂದೆಯೇ ಕುಟುಂಬದ ಮುಖ್ಯಸ್ಥನಾಗಿರುತ್ತಾನೆ.

ಈತನು ತನ್ನ ಹೆಂಡತಿ ಮತ್ತು ಮಕ್ಕಳ ಮೇಲೆ ಸಂಪೂರ್ಣ ಅಧಿಕಾರವನ್ನು ಹೊಂದಿರುತ್ತಾನೆ. ಇಂತಹ ಕುಟುಂಬದಲ್ಲಿ ಮಹಿಳೆಗೆ ಯಾವುದೇ ರೀತಿಯ ಸ್ಥಾನ ಇರುವುದಿಲ್ಲ. ಈ ಕುಟುಂಬವು ಹುಟ್ಟಿಕೊಂಡಿರುವುದೇ ವಿವಾಹದ ಸಂದರ್ಭದಲ್ಲಿ ವಿವಾಹದ ನಿಯಮಗಳಿಂದ. ವಿವಾಹವಾದ ನಂತರ ಆ ಸ್ತ್ರೀಯು ತನ್ನ ತೌರು ಮನೆಯಲ್ಲಿ ಇರುವಂತಿರದೇ ಗಂಡನ ಮನೆಯಲ್ಲಿ ವಾಸಿಸಬೇಕಾಗುವುದು. ಆಗ ತಾನಾಗಿಯೇ ಅವಳ ಮಕ್ಕಳು ತಂದೆಯ ವಶಕ್ಕೆ ಸೇರುತ್ತಾರೆ. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿಯು ಅಂದರೆ ಪಿತ್ರಾರ್ಜಿತ ಆಸ್ತಿಯು ಮಹಿಳೆಗೆ ದೊರಕುವುದಿಲ್ಲ. ಅವಳು ತನ್ನ ಹಕ್ಕನ್ನು ಕಳೆದುಕೊಂಡಿದ್ದಾಳೆ. ಇಲ್ಲಿ ಆಸ್ತಿಯು ತಂದೆಯಿಂದ ಮಗನಿಗೆ, ಮಗನಿಂದ ಮಗನ ಮಗನಿಗೆ ಹೀಗೆ ಗಂಡು ಸಂತಾನಕ್ಕೆ ಮಾತ್ರ ಸೇರುತ್ತದೆ. ಒಂದು ವೇಳೆ ಗಂಡು ಸಂತಾನವಿಲ್ಲದಿದ್ದರೆ, ದತ್ತು ಪುತ್ರನನ್ನು ಪಡೆದು ಆತನಿಗೆ ಆಸ್ತಿಯನ್ನು ವರ್ಗಾಯಿಸುವರೇ ಹೊರತಾಗಿ ತನ್ನ ಕುಟುಂಬದಲ್ಲಿ ತಾನೇ ಹೆತ್ತಂತಹ ಹೆಣ್ಣು ಮಕ್ಕಳಿಗೆ ಆಸ್ತಿಯು ದೊರೆಯುವುದಿಲ್ಲ. ಪಿತೃಪ್ರಧಾನ ಕುಟುಂಬದಲ್ಲಿ ತಂದೆಯಾದವನು ಮನೆಯವರ ಜೊತೆ ಮಾತನಾಡಿ ನಿರ್ಣಯವನ್ನು ತೆಗೆದುಕೊಳ್ಳದೆ ತನಗೆ ಇಷ್ಟ ಬಂದ ಹಾಗೆ ತನಗೆ ಅನುಕೂಲವಾಗುವ ಹಾಗೆ ನಿರ್ಣಯವನ್ನು ತೆಗೆದುಕೊಳ್ಳುತ್ತಾನೆ. ತಾನು ತೆಗೆದುಕೊಂಡ ನಿರ್ಣಯವೇ ಅಂತಿಮ ನಿರ್ಣಯವೆಂದು ಹೇಳಿ ಅದನ್ನು ಪಾಲಿಸದವರಿಗೆ ಶಿಕ್ಷೆಯನ್ನು ವಿಧಿಸುತ್ತಾನೆ. ಈ ರೀತಿ ನಿರ್ಣಯವನ್ನು ತೆಗೆದುಕೊಳ್ಳಲು ಸಂಪೂರ್ಣವಾಗಿ ಅಧಿಕಾರವನ್ನು ಹೊಂದಿರುತ್ತಾನೆ.

ಉದಾ : ಹರಿಶ್ಚಂದ್ರನು ತನ್ನ ಹೆಂಡತಿಯನ್ನು ಮಾರಿಕೊಂಡನು. ಹಾಗೆಯೇ ಪಾಂಡವರು ಜೂಜಿನಲ್ಲಿ ದ್ರೌಪದಿಯನ್ನು ಪಣವಾಗಿಟ್ಟಿದ್ದರು. ಇವೆಲ್ಲವನ್ನು ಪುರುಷನು ಮಹಿಳೆಯರ ಮೇಲೆ ತನಗೆ ಬೇಕಾದ ಅಂದರೆ ತನಗೆ ಅನುಕೂಲಕ್ಕೆ ತಕ್ಕಂತೆ ನಿರ್ಣಯವನ್ನು ತೆಗೆದುಕೊಳ್ಳುತ್ತಾರೆ. ಇಂಥ ಕುಟುಂಬಗಳಲ್ಲಿ ಮಹಿಳೆಯರು ಸ್ವತಂತ್ರವಾಗಿ ಜೀವಿಸುವ ಹಕ್ಕನ್ನು ಪಡೆದಿರುವುದಿಲ್ಲ. ಅವರ ದಿನನಿತ್ಯದ ಕಾರ್ಯಗಳಲ್ಲಿಯು ಪುರುಷನ ನಿರ್ಧಾರಗಳಿರುತ್ತವೆ. ಇಂಥಹ ಕುಟುಂಬಗಳಲ್ಲಿ ಮಹಿಳೆಯು ಇಡೀ ಜೀವನವನ್ನು ಮನೆಕೆಲಸ ಮಾಡುವುದರಲ್ಲಿಯೇ ಕಳೆಯಬೇಕಾಗಿದೆ. ಅವಳು ಮನೆಯ ಹೊಸ್ತಿಲುದಾಟಿ ಹೊರಗೆ ಹೋಗದಂತೆ, ಒಂದು ವೇಳೆ ಅವಳು ಹೊರಗೆ ಹೋದರೆ ತನ್ನ ಕುಟುಂಬಕ್ಕೆ ಧಕ್ಕೆ ಬರುವುದೆಂದು ತಿಳಿದು ಪುರುಷನು ಅವಳಿಗೆ ಮನೆಬಿಟ್ಟು ಹೊರಗೆ ಹೋಗದಂತೆ ನಿಯಂತ್ರಣವನ್ನು ಹೇರಿದ್ದಾನೆ. ಈ ರೀತಿ ನಿರ್ಣಯವನ್ನು ತೆಗೆದುಕೊಳ್ಳಲು ಪುರುಷನಿಗೆ ಸಂಪೂರ್ಣವಾದ ಅಧಿಕಾರವಿದೆ. ಈ ಕುಟುಂಬದಲ್ಲಿ ಸ್ತ್ರೀಯು ಸಂಪೂರ್ಣವಾಗಿ

ಪುರುಷನಿಗೆ ಅಧೀನಳಾಗಿರಬೇಕು. ಅವಳು ಪರಪುರುಷರ ಜೊತೆ ಮಾತನಾಡುವುದಾಗಲಿ ಅವರನ್ನು ಕಣ್ಣೆತ್ತಿ ಸಹ ನೋಡುವಂತಿರಲಿಲ್ಲ. ಸಂಪೂರ್ಣವಾಗಿ ತನ್ನ ಜೀವನದುದ್ದಕ್ಕೂ ಅವಳು ನಿಷ್ಠಾವಂತಳಾಗಿ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಂಡು ಹೋಗಬೇಕಾಗುತ್ತದೆ. ಗಂಡನು ಕ್ರೂರಿ ಎನಿಸಿದರೆ ಆತನನ್ನು ತ್ಯಜಿಸಿ ಬೇರೆಯವರೊಂದಿಗೆ ಮದುವೆಯಾಗುವಂತಿರಲಿಲ್ಲ. ಆದರೆ ಪಿತೃಪ್ರಧಾನ ಕುಟುಂಬದಲ್ಲಿ ಪುರುಷನಿಗೆ ಸಂಪೂರ್ಣವಾದ ಅಧಿಕಾರವಿತ್ತು. ಅವನು ವಿವಾಹಬಾಹಿರ ಸಂಬಂಧಗಳನ್ನು ಇಟ್ಟು ಕೊಳ್ಳುತ್ತಿದ್ದನು. ಈ ರೀತಿ ಸಂಬಂಧವನ್ನು ಇಟ್ಟುಕೊಳ್ಳುವುದು ಆತನ ಹಕ್ಕಾಗಿತ್ತು. ಒಂದು ವೇಳೆ ಹೆಂಡತಿಯು ವ್ಯಭಿಚಾರಿಣಿ ಎಂದು ತಿಳಿದುಬಂದರೆ ಅವಳನ್ನು ತಿರಸ್ಕರಿಸುತ್ತಿದ್ದನು. ಕೆಲವೊಂದು ಬಾರಿ ತನ್ನ ಕುಟುಂಬಕ್ಕೆ ಕುಂದುಬರುವುದೆಂದು ಅವಳನ್ನು ಕೊಂದು ಹಾಕುತ್ತಿದ್ದನು. ಒಂದು ವೇಳೆ ಹೆಂಡತಿಯು ಬಂಜೆಯಾಗಿದ್ದರೆ, ಅವಳನ್ನು ತ್ಯಜಿಸಿ ಬೇರೆ ಮದುವೆ ಮಾಡಿಕೊಳ್ಳಬಹುದಿತ್ತು. ಅನೇಕ ಉಪಪತ್ನಿಯರನ್ನು ಇಟ್ಟುಕೊಳ್ಳುವುದು ಅಧಿಕಾರವಾಗಿತ್ತು, ಹೊರತು ಅಪರಾಧವಾಗಿರಲಿಲ್ಲ. ಪತಿಯ ಇಂತಹ ಗುಣಗಳಿಗೆ ಪತ್ನಿಯಾದವಳು ಯಾವುದೇ ರೀತಿಯ ಕ್ರಮತೆಗೆದುಕೊಳ್ಳುವಂತಿರಲಿಲ್ಲ. ಹೆಂಡತಿಯಾದವಳು ಕಟ್ಟುನಿಟ್ಟಾದ ದಾಂಪತ್ಯ ಜೀವನವನ್ನು ನಡೆಸಬೇಕಾಗುತ್ತಿತ್ತು. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣಿಗಷ್ಟೇ ವೈವಾಹಿಕ ಜೀವನದಲ್ಲಿ ನಿಷ್ಠೆಯಿಂದ ಇರುವುದು ಸೀಮಿತವಾಗಿದೆ. ಅವಳು ಸ್ವತಂತ್ರವಾಗಿ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳುವಂತಿರಲಿಲ್ಲ. ಒಂದುವೇಳೆ ತೆಗೆದುಕೊಂಡರು ಅದು ಅಪರಾಧವೆಂದು ಶಿಕ್ಷೆಗೆ ಒಳಪಡಿಸುತ್ತಿದ್ದರು.

ಮಗನು ಕುಟುಂಬದ ಆಸ್ತಿ ಎಂದು ತಿಳಿದು ಆತನಿಗೆ ಯಾವುದೇ ರೀತಿಯಲ್ಲಿ ತೊಂದರೆಯಾಗದ ಹಾಗೆ ಖರ್ಚು ಮಾಡುತ್ತಿದ್ದರು. ಉದಾ : ಶಿಕ್ಷಣ ಪಡೆಯುವಲ್ಲಿ, ಅದೇ ಕುಟುಂಬದಲ್ಲಿ ಹುಟ್ಟಿದ ಮಗಳಿಗೆ ಖರ್ಚುಮಾಡುವುದು ದಾನವೆಂದು ತಿಳಿದಿದ್ದರು. ಈ ರೀತಿ ಇರುವುದರಿಂದ ಅವಳಿಗೆ ಸರಿಯಾಗಿ ಶಿಕ್ಷಣ ಪಡೆಯುವ ಅವಕಾಶವಿರಲಿಲ್ಲ. ಆದ್ದರಿಂದ ಕುಟುಂಬದಲ್ಲಿ ಸ್ತ್ರೀಪುರುಷರ ಸಂಬಂಧಗಳಲ್ಲಿ ತನ್ನಷ್ಟಕ್ಕೆ ತಾನೇ ತಾರತಮ್ಯವು ಪ್ರಾರಂಭವಾಗಿ ಬಿಡುತ್ತಿದೆ. ಕೊನೆಯದಾಗಿ ತನ್ನ ತೌರು ಮನೆ ತನ್ನದಲ್ಲ ಎನ್ನುವ ಭಾವನೆಯನ್ನು ಮೂಡಿಸಿ ಹೆಣ್ಣನ್ನು ದುರ್ಬಲಳನ್ನಾಗಿ ಮಾಡಿ ಪುರುಷನು ಪ್ರಬಲನಾಗುತ್ತಿದ್ದಾನೆ. ಹೆಣ್ಣಿಗೆ ತನ್ನ ತೌರುಮನೆಯಲ್ಲಿ ಆಗಲಿ ಅಥವಾ ಗಂಡನ ಮನೆಯಲ್ಲಿಯೇ ಆಗಲಿ ಆಸ್ತಿ ದೊರೆಯದಂತಾಗಿದೆ. ಅವಳಿಗೆ ಆಸ್ತಿಯ ಬಗ್ಗೆ ಕಲ್ಪನೆ ಮತ್ತು ಆಸ್ತಿಯ ಹಕ್ಕನ್ನು ಸಿಗದಂತೆ ಮಾಡುವುದೇ ವಿವಾಹದ ನಿಯಮವಾಗಿದೆ. ಈ ವಿವಾಹದ ನಿಯಮಗಳಿಂದ ಲಿಂಗತಾರತಮ್ಯವು ಬಹಳ ಪ್ರಮುಖವಾದ ಪಾತ್ರವಹಿಸುತ್ತದೆ. ವಿವಾಹವಾಗುವುದರಿಂದ ಪತಿಯು ಮೊದಲನೆಯ ದರ್ಜೆಯ ಪ್ರಜೆಯಾಗುವನು, ಮಹಿಳೆಯು ಎರಡನೆ ದರ್ಜೆಯ ಪ್ರಜೆಯಾಗುವಳು. ಕಾರಣ ಹೆಂಡತಿಯ ಸ್ಥಾನ ಪತಿಯ ಪಾದದಲ್ಲಿರುವುದು

ಅಂದರೆ ಪತಿಯ ಕನಿಷ್ಠ ಸ್ಥಾನದಲ್ಲಿ ಹೆಂಡತಿಯಾದವಳ ಶ್ರೇಷ್ಠ ಸ್ಥಾನವನ್ನಾಗಿಸಿದೆ. ಇದರಿಂದ ಹೆಂಡತಿಯ ಮೇಲೆ ಜನನ ಕ್ಷಮತೆ, ಲೈಂಗಿಕತೆ ನಿಯಂತ್ರಣದಲ್ಲಿಡಲು ಮತ್ತು ವಂಶದ ಶುದ್ಧತೆಯನ್ನು ಕಾಪಾಡಿಕೊಳ್ಳಲು ಪಾತಿವ್ರತ್ಯವನ್ನು ಉಳಿಸಿಕೊಳ್ಳಲು ವಿವಾಹ ಸಂಸ್ಥೆಯು ಜಾರಿಯಲ್ಲಿ ಬಂದಿದೆ. ಈ ವಿವಾಹ ಎನ್ನುವ ಸಂಸ್ಥೆಯಲ್ಲಿಯೇ ಮಹಿಳೆಯರ ಹಲವಾರು ಸಮಸ್ಯೆಗಳು ಹುದುಗಿಕೊಂಡಿವೆ. ವಿವಾಹವಾಗುವುದರಿಂದ ಮಹಿಳೆಯು ಅನೇಕ ಸಮಸ್ಯೆಗಳಿಗೆ ಗುರಿಯಾಗುತ್ತಿದ್ದಾಳೆ.

## ವಿವಾಹ ಸಂಸ್ಥೆ

ಪುರುಷನಾದವನು ಸಂಪೂರ್ಣವಾಗಿ ಮಹಿಳೆಯನ್ನು ನಿಯಂತ್ರಣದಲ್ಲಿಡುವುದು ಎಂದರೆ ಆಕೆಯ ಲೈಂಗಿಕತೆಯನ್ನು ನಿಯಂತ್ರಿಸುವುದು ಮತ್ತು ಆಕೆಯ ಮೇಲೆ ತನ್ನ ಸಂಪೂರ್ಣ ಅಧಿಕಾರವನ್ನು ಚಲಾಯಿಸುವುದೇ ಪುರುಷನ ಹುಚ್ಚಾಗಿದೆ. ಅಧಿಕಾರ ಚಲಾಯಿಸುವುದು ಆಕೆಯ ಮೇಲೆ ನಿಯಂತ್ರಣ ಸಾಧಿಸುವುದು ಹೇಗೆಂದರೆ ನಾನಲ್ಲದೆ ಈ ಹೆಣ್ಣಿನ ದೇಹವನ್ನು ಇನ್ನೊಬ್ಬರು ಬಳಸಬಾರದು ಎಂದು ಪುರುಷನು ಮಹಿಳೆಗೆ ನಿಯಮವನ್ನು ಮಾಡಿಸಂಪೂರ್ಣವಾಗಿ ಆ ಹೆಣ್ಣನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವುದಕ್ಕೆ ಮದುವೆ(ವಿವಾಹ) ಎನ್ನುವ ವ್ಯವಸ್ಥೆಯು ಪ್ರಾರಂಭವಾಯಿತು. ಮದುವೆಯ ಮೂಲಕ ಆಕೆಯ ದೇಹದ ಮೇಲೆ ಸಂಪೂರ್ಣ ನಿಯಂತ್ರಣವನ್ನು ಹೇರುವುದು ಮತ್ತು ಅವಳನ್ನು ತನ್ನ ಆಸ್ತಿಯೆಂದು ತಿಳಿಯುವುದು ಅಲ್ಲದೆ ಆಕೆಯ ಮೇಲೆ ತನ್ನ ಅಧಿಕಾರವನ್ನು ಚಲಾಯಿಸಲಾಯಿತು.

ಪುರುಷ ಪ್ರಧಾನ ಸಮಾಜದಲ್ಲಿ ವಿವಾಹದಿಂದ ಪುರುಷನು ಸ್ತ್ರೀಯನ್ನು ಗುರುತಿಸಿದನು. ಆದರೆ ಮಹಿಳೆಯು ಪುರುಷನನ್ನು ಗುರುತಿಸುವಂತಿರಲಿಲ್ಲ. ಈ ರೀತಿಯ ವಿವಾಹದ ನಿಯಮಗಳನ್ನು ಪುರುಷನು ತನಗೆ ಅನುಕೂಲವಾಗುವ ಹಾಗೆಯೇ ಕಟ್ಟಿಕೊಂಡಿದ್ದಾನೆ. ವಿವಾಹದ ಮೂಲಕ ಆಕೆಯ ಲೈಂಗಿಕತೆ ಮತ್ತು ಸಂತಾನದ ಮೇಲೆ ನಿಯಂತ್ರಣವನ್ನು ಹೇರಿದನು. ಒಂಬತ್ತು ತಿಂಗಳು ಹೆತ್ತು ಹೊತ್ತು ಸಾಕಿದ ಮಗು ಮಹಿಳೆಗೆ ಸೇರಬೇಕು. ಆದರೆ ಪುರುಷನು ವಿವಾಹದ ಮೂಲಕ ವಂಶವೆನ್ನುವ ಹೆಸರಿನಲ್ಲಿ ಸಂತಾನದ ಮೇಲೆಯೂ ಕೂಡ ತನ್ನ ನಿಯಂತ್ರಣ ಸಾಧಿಸಿದ. ಸಂತಾನದ ಮೇಲೆ ನಿಯಂತ್ರಣವನ್ನು ಸಾಧಿಸುವಲ್ಲಿಯೂ ಸಹ ಮಹಿಳೆ ಮತ್ತು ಪುರುಷ ಎನ್ನುವ ತಾರತಮ್ಯವನ್ನು ಮಾಡಿದನು. ತನ್ನ ಹಾಗೆ ಹುಟ್ಟಿದ ಗಂಡುಮಕ್ಕಳನ್ನು ತನ್ನ ಆಸ್ತಿ ಎಂದು ತಿಳಿದು ತನ್ನ ಆಸ್ತಿಯ ಅಧಿಕಾರವನ್ನು ತನ್ನ ಪುರುಷ ಸಂತಾನಕ್ಕೆ ನೀಡಿದನು. ಹಾಗೆಯೇ ಹೆಣ್ಣು ಮಗುವನ್ನು ಪರ ಎಂದು ತಿಳಿದು ಅವಳಿಗೆ ಎಲ್ಲಾ ರೀತಿಯಿಂದಲೂ ವಂಚಿತಳಾಗುವಂತೆ ಮಾಡಿದ್ದಾನೆ.

ಈ ರೀತಿಯಾಗಿ ವಿವಾಹದ ಮೂಲಕ ಪುರುಷನು ಮಹಿಳೆಯ ಲೈಂಗಿಕತೆಯು ಅವಳದಲ್ಲ, ಅವಳ ಮಕ್ಕಳು ಅವಳದಲ್ಲ, ಈ ರೀತಿಯಾಗಿ ಸಂಪೂರ್ಣವಾಗಿ ಗಂಡಸಿನ ನಿಯಂತ್ರಣದಲ್ಲಿ ಸಿಲುಕಿಹಾಕಿಕೊಳ್ಳು

ವಂತಾಯಿತು. ಇದರಿಂದ ಗಂಡನು ಹೇಳಿದ ಹಾಗೆಯೇ ಅವಳು ತನ್ನ ಬದುಕನ್ನು ಬದುಕಬೇಕಾಗಿದೆ. ಈ ರೀತಿ ಅವಳು ಪುರುಷನಿಗೆ ಅಧೀನಳಾಗಿ ಬದುಕುವುದರಿಂದ ವ್ಯಕ್ತಿತ್ವ ಎನ್ನುವುದನ್ನೆ ಅವಳು ಕಳೆದುಕೊಂಡಿದ್ದಾಳೆ. ಅವಳು ಅಸಹಾಯಕ ಸ್ಥಿತಿಗೆ ಬರುವಂತೆ ಮಾಡಿ ಪುರುಷನು ಅವಳ ಅಸಹಾಯಕತೆಯನ್ನು ತನ್ನ ಅಧಿಕಾರದಲ್ಲಿ ಇಟ್ಟುಕೊಂಡು ತನ್ನ ಸುಖ ಸಂತೋಷಗಳಿಗಾಗಿ ಅವಳನ್ನು ದುಡಿಸಿಕೊಳ್ಳಲು ಪ್ರಾರಂಭಿಸಿದ. ಈ ರೀತಿಯಾಗಿ ವಿವಾಹದ ಮೂಲಕ ಸ್ತ್ರೀ ಪುರುಷರಲ್ಲಿ ತಾರತಮ್ಯವು ಅತಿ ಪ್ರಾಚೀನ ಕಾಲದಿಂದಲೂ ನಡೆಯುತ್ತ ಬಂದಿದೆ. ಈ ರೀತಿಯಾಗಿ ವಿವಾಹದ ಮೂಲಕ ಮಹಿಳೆಯರಿಗೆ ಅನೇಕ ಸಮಸ್ಯೆಗಳು ಹುಟ್ಟಿಕೊಂಡವು.

## ವಿವಾಹದಿಂದುಂಟಾಗುವ ಸಮಸ್ಯೆಗಳು

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹ ಎನ್ನುವ ಸಂಬಂಧದಲ್ಲಿ ಪ್ರವೇಶಿಸಿದ ಹೆಣ್ಣಿನ ಮೇಲೆ ಅನೇಕ ಜವಾಬ್ದಾರಿಗಳನ್ನು ಹೇರಲಾಗಿದೆ. ವಿವಾಹ ಎನ್ನುವ ಸಂಬಂಧಗಳು ಸೃಷ್ಟಿಯಾಗಿರುವುದೇ ಅಸಮಾನತೆಯ ತತ್ವಗಳನ್ನು ಆಧರಿಸಿ, ಗಂಡು ಶ್ರೇಷ್ಠನೆಂದು ಆತ ಹಾಗೂ ಆತನ ಕುಟುಂಬದವರ ಬೇಡಿಕೆಗಳಿಗೆ ವಿವಾಹವಾಗುವ ಸ್ತ್ರೀಯು ಒಪ್ಪಲೇ ಬೇಕಾಗಿದೆ. ವಿವಾಹ ಎನ್ನುವ ಸಂಬಂಧದಲ್ಲಿ ಮಹಿಳೆಯನ್ನು ವಿಶೇಷವಾಗಿ ಭಾರತೀಯ ಸಮಾಜದಲ್ಲಿ ಹೊಸ ಹೊಸ ಪಾತ್ರಗಳನ್ನು ನಿರೀಕ್ಷಿಸುವರು. ಹೆಣ್ಣಿನ ವಿವಾಹವೇ ಜೀವನದ ಪರಮಗುರಿ ಎಂದು ತಿಳಿದ ಬಹುತೇಕ ಕುಟುಂಬಗಳು ವಿವಾಹದ ಮೂಲಕ ಹೆಣ್ಣಿನ ವ್ಯಕ್ತಿತ್ವ ನಾಶದ ಬಗ್ಗೆ ಕಾಳಜಿಯನ್ನು ಸಾಮಾನ್ಯವಾಗಿ ವ್ಯಕ್ತಪಡಿಸುವುದಿಲ್ಲ. ಹೆಣ್ಣಾಗಿ ಹುಟ್ಟಿದ ಮೇಲೆ ಅವಮಾನಗಳನ್ನು ಸಹಿಸಲೇ ಬೇಕಾಗಿದೆ. ಇಂದಿಗೂ ಸಹ ಕೆಲವು ಕುಟುಂಬಗಳಲ್ಲಿ ವಿವಾಹವಾದ ಸ್ತ್ರೀಯ ಮೊದಲಿನ ಹೆಸರನ್ನು ಬಿಟ್ಟು ಬೇರೆ ಹೆಸರಿನಿಂದ ಕರೆಯುವ ಪದ್ಧತಿಗಳು ಆಚರಣೆಯಲ್ಲಿವೆ. ಸಾರ್ವಜನಿಕ ಮತ್ತು ಖಾಸಗಿ ಬದುಕಿನಲ್ಲಿ ಸ್ತ್ರೀಯನ್ನು ಗುರುತಿಸುವುದೇ ಪತಿಯ ಹೆಸರಿನಿಂದಲೇ ಹೊರತಾಗಿ ಅವಳಿಗೆ ಅವಳದೇ ಆದಂತಹ ಸ್ವತಂತ್ರ ಹೆಸರಿನಿಂದ ಗುರುತಿಸಲು ಸಮಾಜವು ಒಪ್ಪುವುದಿಲ್ಲ. ವಿವಾಹದ ಅನೇಕ ಆಚರಣೆಗಳಲ್ಲಿ ಸ್ತ್ರೀಯ ಅಧೀನತೆಯನ್ನು ಮತ್ತು ಪುರುಷನ ಅಧಿಕಾರವನ್ನು ಎತ್ತಿ ಹಿಡಿಯುವಂತವುಗಳಾಗಿವೆ. ಕನ್ಯಾದಾನ ಮಾಡುವುದು ಹೆಣ್ಣಿಗೆ ಗಂಡನ ಮನೆಯೇ ಭೂಷಣ ಮುಂತಾದ ಕಲ್ಪನೆಗಳನ್ನು ವಿವಾಹ ಎನ್ನುವ ಸಂಸ್ಥೆಯ ಒಳಗೆ ಪುರುಷ ಪ್ರಧಾನ ಚಿಂತನೆಗಳು ಅಡಗಿವೆ. ಹೆಣ್ಣುಮಕ್ಕಳು ವಿವಾಹವಾಗುವುದರಿಂದ ಹೊಸ ಪರಿಸರಕ್ಕೆ ಕಾಲಿಡುತ್ತಾರೆ. ಆ ಹೊಸ ಪರಿಸರವನ್ನು ಹೊಂದಿಕೊಳ್ಳ ಬೇಕಾಗುವುದರಿಂದ ಅನೇಕ ರೀತಿಯ ದೈಹಿಕ ಹಾಗೂ ಮಾನಸಿಕ ಹಿಂಸೆಗಳಿಗೆ ಒಳಗಾಗುತ್ತಾರೆ. ಪತಿಯಿಂದಲೆ ಅಲ್ಲದೆ ಕುಟುಂಬದವರೆಲ್ಲರು ತನ್ನ ಮೇಲೆ ಅಧಿಕಾರ ಚಲಾಯಿಸುವುದನ್ನು ತಿಳಿದರೂ ಸಹ ಹೊಂದಿಕೊಂಡು ಹೋಗಬೇಕಾಗಿದೆ. ಮನೆಗೆ ಸೊಸೆ ಬಂದ ತಕ್ಷಣ ಮನೆ ಕೆಲಸದ ಜವಬ್ದಾರಿಯನ್ನು

ಒಪ್ಪಿಸಿಬಿಡುತ್ತಾರೆ. ಈ ರೀತಿ ಅವಳಿಗೆ ಜವಾಬ್ದಾರಿಗಳನ್ನು ಒಪ್ಪಿಸಿ ಅದರಲ್ಲಿಯ ತಪ್ಪುಗಳನ್ನು ಕಂಡುಹಿಡಿದು ಆ ತಪ್ಪಿಗೆ ಶಿಕ್ಷೆಯನ್ನು ನೀಡುವುದರಿಂದ ತನ್ನ ಗಂಡನ ಮನೆಯಲ್ಲಿಯೇ ತಾನು ಪರಾಧಿನಳಾಗಿ ಬದುಕನ್ನು ನಡೆಸಬೇಕಾಗಿದೆ. ಎಂತಹ ಪರಿಸ್ಥಿತಿಕಯಲ್ಲಿಯೂ ಸಹ ತಾನು ಹುಟ್ಟಿದ ಮನೆಗೆ ಕಳಂಕ ತರಬಾರದು ಎಂದು ತಿಳಿದು ಗಂಡ ಮತ್ತು ಗಂಡನ ಮನೆಯವರು ನೀಡಿದ ಎಲ್ಲ ಕಷ್ಟಗಳನ್ನು ಮೌನದಿಂದ ಸಹಿಸುತ್ತಿದ್ದಾಳೆ. ಪುರುಷ ಶ್ರೇಷ್ಟತೆಯನ್ನು ಪ್ರತಿಪಾದಿಸುವ ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಹೆಣ್ಣನ್ನು ನಾಶಮಾಡುವುದು ವಿವಾಹ ಸಂಬಂಧಿ ಹಿಂಸೆಗಳು ಕುಟುಂಬದಲ್ಲಿ ಬದುಕಿನ ಒಂದು ಅಂಗವಾಗಿದ್ದು, ಅದಕ್ಕೆ ಬಲಿಯಾಗುತ್ತಿರುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ.

## ಶೀಲ ಮತ್ತು ಪಾತಿವ್ರತ್ಯದ ಕಲ್ಪನೆ

ನಮ್ಮ ಪಿತೃ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಶೀಲ ಮತ್ತು ಪಾತಿವ್ರತ್ಯವು ವೈವಾಹಿಕ ಜೀವನದಲ್ಲಿ ಅತಿ ಪ್ರಮುಖವಾದ ಪಾತ್ರವಹಿಸುತ್ತದೆ. ಪುರಾಣ ಪುಣ್ಯಕಥೆಗಳಲ್ಲಿಯೂ ಸಹ ಪಾತಿವ್ರತ್ಯವನ್ನು ಕುರಿತು ಒತ್ತಿ ಹೇಳುತ್ತಾ ನಿಂತ ನೀರಲ್ಲಿ ಪರಪುರಷನ ಪ್ರತಿಬಿಂಬವನ್ನು ನೋಡಿದರೂ ಸಹ ಅವಳು ಅಪವಿತ್ರಳಾಗುತ್ತಾಳೆ ಎನ್ನುವ ಕಲ್ಪನೆಯನ್ನು ಮೂಡಿಸಿದ್ದಾರೆ. ಮೊದಲು ಮಗುವಿನ ತಾಯಿಯನ್ನು ಗುರುತಿಸುವುದು ಸುಲಭವಾಗಿತ್ತು. ಆದರೆ ತಂದೆಯನ್ನು ಗುರುತಿಸುವುದು ಕಷ್ಟಕರವಾಗಿತ್ತು. ಯಾವಾಗ ತಂದೆಯನ್ನು ಗುರುತಿಸಲು ಪ್ರಾರಂಭವಾಯಿತು ಅಂದಿನಿಂದ ಹೆಣ್ಣಿನ ಶೀಲ ಪಾತಿವ್ರತ್ಯಕ್ಕೆ ಹೆಚ್ಚು ಒತ್ತುಕೊಟ್ಟು ಅವಳನ್ನು ಬಂಧನದಲ್ಲಿಟ್ಟು ತನ್ನ ವಂಶವನ್ನು ಮುಂದುವರೆಸಲು ಪುರುಷನು ಸ್ತ್ರೀಯ ಮೇಲೆ ಹೇರಿದ ಆದರ್ಶಗಳಾಗಿವೆ.

ಮಹಿಳೆಗೆ ಮಕ್ಕಳ ಲಾಲನೆ ಪಾಲನೆಯು ಪ್ರಕೃತಿ ಸಹಜವೆಂದು ಹೇಳಿ ಪುರುಷ ಪ್ರಧಾನ ಸಂಸ್ಕೃತಿಯು ತಂದೆ ತನದ ಅಧಿಕಾರವನ್ನು ಗಟ್ಟಿಗೊಳಿಸಿಕೊಂಡಿದ್ದಾನೆ. ಆದುದರಿಂದಲೇ ಕುಟುಂಬದಲ್ಲಿ ಪತಿಯು ಪ್ರಮುಖ, ಪ್ರಧಾನ, ಶ್ರೇಷ್ಟ ಎನ್ನಿಸಿಕೊಳ್ಳುತ್ತಾನೆ. ಕುಟುಂಬದಲ್ಲಿ ಪ್ರಥಮ ದರ್ಜೆಯ ಪ್ರಜೆಯಾಗಿದ್ದಾನೆ. ಆಗ ಸ್ತ್ರೀಯು ಸಹಜವಾಗಿ ಎರಡನೆ ದರ್ಜೆಯ ಪ್ರಜೆಯಾಗಲು ಒಪ್ಪಿಕೊಳ್ಳುತ್ತಾಳೆ. ಈ ರೀತಿಯಾಗಿ ಅವಳು ಎರಡನೆಯ ದರ್ಜೆರಯಲ್ಲಿರುವುದರಿಂದ ಗಂಡನಾದವನು ಅವಳಿಂದ ಒಳ್ಳೆಯ ನಡತೆ, ಒಳ್ಳೆಯ ಗುಣಗಳನ್ನು ಬಯಸುವನು. ಈ ರೀತಿಯಾಗಿ ಮಹಿಳೆಯರಲ್ಲಿ ಪಾತಿವ್ರತ್ಯದ ಕಲ್ಪನೆಯು ಬೆಳೆದು ಬಂದಿರುವುದರಿಂದ ಗಂಡಿನ ಅಸ್ತಿತ್ವವನ್ನು ಆಕೆಯ ಮುತ್ತೈದೆತನ ಎನ್ನುವ ಕಲ್ಪನೆಯಲ್ಲಿ ಕಂಡುಕೊಳ್ಳಲು ಪ್ರಾರಂಭಿಸಿದರು. ಇದರಿಂದಾಗಿಯೇ ಪತಿಯ ಶ್ರೇಷ್ಟತೆಯನ್ನು ಮತ್ತು ಪತ್ನಿಯ ಮಂಗಲತೆಯನ್ನು ಸೂಚಿಸಲು ಪ್ರಾರಂಭವಾಯಿತು. ಆದುದರಿಂದಲೇ ಮುತ್ತೈದೆಯಾದವಳು ಕಾಲುಂಗುರ, ತಾಳಿ, ಬಳೆ, ಕುಂಕುಮ, ಹೂ ಧರಿಸಬೇಕು ಮತ್ತು ತನ್ನ ಬದುಕಿರುವ ಕೊನೆಯ ದಿನಗಳವರೆಗೂ ಆತನಿಗೆ

ನಿಷ್ಠಳಾಗಿರಬೇಕು. ಪತ್ನಿಯ ಬದುಕಿನ ಸಂಪೂರ್ಣತೆ ಇರುವುದೇ ಪತಿಯಿಂದ ಎಂದು ತಿಳಿದರು. ಪಾತಿವ್ರತ್ಯದ ಹೆಸರಿನಲ್ಲಿ ಪುರುಷ ಪ್ರಧಾನ ಸಮಾಜವು ಸೀತೆಯನ್ನು ಬೆಂಕಿಯಲ್ಲಿ ಪರೀಕ್ಷಿಸಿದರು, ಅವಳನ್ನು ಕಾಡಿಗೆ ಅಟ್ಟಿದರು ಸಹ ಇದರಲ್ಲಿ ರಾಮನ ತಪ್ಪು ಕಾಣಲಿಲ್ಲ. ಇವಳು ತನ್ನ ಪಾತಿವ್ರತ್ಯವನ್ನು ಉಳಿಸಿಕೊಳ್ಳಲು ಪತಿಯು ಕೊಟ್ಟ ಶಿಕ್ಷೆಯನ್ನೆಲ್ಲ ಅನುಭವಿಸಿದಳು. ಹೆಣ್ಣಿನ ಮೇಲೆ ಶೀಲದ ಹೊರೆಯನ್ನು ಮತ್ತು ಹೆಣ್ಣಿಗೆ ಹೊಸ್ತಿಲು ದಾಟದಂತಹ ನಿರ್ಬಂಧನೆಯನ್ನು, ಪಾತಿವ್ರತ್ಯದ ಹತೋಟಿಯನ್ನು ಶತಶತಮಾನಗಳಿಂದ ಹೇರಲಾಗಿದೆ. ಹೆಣ್ಣಿನ ಶೀಲದ ಬಗ್ಗೆ ಪುರುಷನಿಗೆ ಒಂದು ಸಣ್ಣ ಅನುಮಾನ ಸಂಶಯ ಬಂದರೆ ಸಾಕು ಅವಳು ಜೀವನದುದ್ದಕ್ಕೂ ನೋವನ್ನು ಅನುಭವಿಸಬೇಕಾಗಿದೆ. ಒಂದು ಹೆಣ್ಣು ಯಾರನ್ನು ಮದುವೆಯಾಗಬೇಕು, ಯಾರನ್ನು ಪ್ರೀತಿಸಬೇಕು ಎನ್ನುವ ನಿರ್ಧಾರವನ್ನು ಪುರುಷನೆ ತೆಗೆದುಕೊಳ್ಳುವನು. ಆದರೆ ಗಂಡಸು ಹತ್ತು ಹೆಂಗಸರನ್ನು ಮದುವೆಯಾದರೂ, ಅನೇಕ ಮಹಿಳೆಯರನ್ನು ಇಟ್ಟುಕೊಂಡರು, ಮಹಿಳೆಯ ಮೇಲೆ ಅತ್ಯಾಚರ ವೆಸಗಿದರು ಸಹ ಆತನ ಶೀಲಕ್ಕೆ ಯಾವುದೇ ರೀತಿಯಿಂದ ಧಕ್ಕೆ ಬರುವುದಿಲ್ಲ. ಸಮಾಜದಲ್ಲಿ ತಲೆ ಎತ್ತಿಮೆರೆಯುವನು. ಆದರೆ ಒಂದು ಹೆಣ್ಣು ಸಮಾಜದಲ್ಲಿ ಯಾರನ್ನು ಪ್ರೀತಿಸುವ ಸ್ವಾತಂತ್ರ್ಯವು ಇಲ್ಲದಾಗಿವೆ. ಹೆಣ್ಣಿನ ಶೀಲ ಅವನ ಪತಿಗೆ ಮಾತ್ರ ಸಂಬಂಧವಿರದೇ ಇಡೀ ಆತನ ಕುಟುಂಬಕ್ಕೆ ಸಂಬಂಧಪಟ್ಟದ್ದಾಗಿದೆ. ಅವಳು ಸ್ವಲ್ಪವು ಎಡವಿದರೆ ಸಾಕು ಕುಟುಂಬಕ್ಕೆ ಕೆಟ್ಟ ಹೆಸರು ಬರುವುದು.

ಇಷ್ಟೇಲ್ಲ ಸ್ತ್ರೀಯರ ಮೇಲೆ ಶೀಲದ ಕಟ್ಟುನಿಟ್ಟುಗಳನ್ನು ಹೇರಿದ್ದಾರೆ. ಆದರೆ ಪುರುಷನ ಶೀಲಕ್ಕೆ ಯಾವುದೇ ರೀತಿಯಾದ ಸೀಮಿತವನ್ನು ಸಮಾಜ ವಿಧಿಸುವುದಿಲ್ಲ. ಪರಸ್ತ್ರೀಯರ ವ್ಯಾಮೋಹದಲ್ಲಿರುವ ಗಂಡನನ್ನು ಹಕ್ಕಿನಿಂದ ಕೇಳುವ ಸಾಮರ್ಥ್ಯವು ಬಹಳಷ್ಟು ಹೆಣ್ಣು ಮಕ್ಕಳಿಗಿರುವುದಿಲ್ಲ. ಆದರೆ ಅವಳ ಅನಿವಾರ್ಯತೆಯು ಕಾರಣವಾಗಿರುತ್ತದೆ.

## ಬಾಲ್ಯವಿವಾಹ

ವಿವಾಹ ಸಂಸ್ಥೆಗಳ ಮೂಲಕ ಬಾಲ್ಯವಿವಾಹವು ಹುಟ್ಟಿಕೊಂಡಿದೆ. ಇದರಿಂದ ಅನೇಕ ಬಾಲಕಿಯರು ಸಮಸ್ಯೆಗಳಿಗೆ ಒಳಗಾಗಿದ್ದಾರೆ. ಹೆಣ್ಣು ಮಗುವು ತಾನು ಜನಿಸಿದಂತಹ ಕುಟುಂಬಕ್ಕೆ ಹೊರೆ ಎನ್ನುವ ಹಾಗೆ ಪುರುಷಪ್ರಧಾನ ಸಮಾಜವು ಮಹಿಳೆಯ ಮೇಲೆ ನಿರ್ಬಂಧನೆಯನ್ನು ಹೇರಿ ಅವಳು ಚಿಕ್ಕವಯಸ್ಸಿನಲ್ಲಿರುವಾಗಲೇ ಮದುವೆಯನ್ನು ಮಾಡಿಕೊಡಲು ಪ್ರಾರಂಬಿಸಿದರು. ಮನು ಹೇಳಿದ ಹಾಗೆ ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲಿ, ಯೌವ್ವನದಲ್ಲಿ ಗಂಡನ ಮತ್ತು ವೃದ್ಯಾಪ್ಯದಲ್ಲಿ ಮಗನ ಆಶ್ರಯದಲ್ಲಿರಬೇಕು. ಅವಳಿಗೆ ಸ್ವತಂತ್ರವಿರಕೂಡದು ಎಂದಿದ್ದಾನೆ. ಹಾಗೆಯೇ ಬಾಲ್ಯದಲ್ಲಿರುವಾಗಲೇ ಪೋಷಕರು ಮದುವೆಯನ್ನು ಮಾಡಿ ಅವರು ತಮ್ಮ ಜವಾಬ್ದಾರಿಯಿಂದ ಮುಕ್ತರಾಗುತ್ತಾರೆ. ಅಲ್ಲದೆ

ಹೆಣ್ಣು ಮಕ್ಕಳು ಪ್ರಾಪ್ತ ವಯಸ್ಸಿಗೆ ಬರುವ ಮುನ್ನವೆ ಅವರಿಗೆ ಮದುವೆ ಮಾಡಬೇಕು. ಇಲ್ಲದಿದ್ದರೆ ಪ್ರತಿಸಲಕ ಋತುಮತಿಯಾದಾಗ ಒಂದು ಭ್ರೂಣವನ್ನು ಕೊಂದ ಪಾಪ ಅವಳ ಕುಟುಂಬಕ್ಕೆ ತಟ್ಟುತ್ತದೆ ಎಂದುಯಜ್ಞವಲ್ಕ್ಯ ಮುನಿಯು ಸ್ಮೃತಿಗಳ ಕಾಲದಲ್ಲಿ ಹೇಳಿದ್ದಾನೆ. "ಅಲ್ಲದೆ ನಃಸ್ತ್ರೀ ಸ್ವಾತಂತ್ರ್ಯಂ ಅರ್ಹತಿ" ಅಂದರೆ ಸ್ತ್ರೀಯು ಸ್ವಾತಂತ್ರ್ಯಕ್ಕೆ ಯೋಗ್ಯಳಲ್ಲ ಎಂದು ಸ್ಮೃತಿಕಾರ ಮನು ಹೇಳಿದ್ದಾನೆ. ಆದ್ದರಿಂದಲೇ ವಿವಾಹಕ್ಕೆ ಮೊದಲು ತಂದೆಯ ರಕ್ಷಣೆಯಲ್ಲಿ, ನಂತರ ಗಂಡನ ರಕ್ಷಣೆಯಲ್ಲಿ ಸ್ತ್ರೀಯಾಗಿರುವವಳು ಇರಬೇಕೆಂದು ಹೇಳಿದ್ದಾನೆ. ಆದ ಕಾರಣ ಬಾಲಕಿಯ ತಂದೆಯಾಗಿರುವವನು ತನ್ನ ಮಗಳನ್ನು ರಕ್ಷಿಸುವ ಹೊಣೆಗಾರಿಕೆಯನ್ನು ಆದಷ್ಟು ಬೇಗನೇ ಆಕೆಯ ಗಂಡನಿಗೆ ವರ್ಗಾಯಿಸುವುದರಿಂದ, ಬಾಲ್ಯದಲ್ಲಿಯೇ ವಿವಾಹ ಮಾಡತೊಡಗಿದರು. ಬಾಲ್ಯವಿವಾಹ ಅಲ್ಲದೆ, ತೊಟ್ಟಿಲಲ್ಲಿಯೇ ವಿವಾಹವನ್ನು ಮಾಡಲು ಪ್ರಾರಂಭಿಸಿದರು. ಅಲ್ಲದೆ ಮಕ್ಕಳು ತಾಯಿಯ ಗರ್ಭದಲ್ಲಿರುವಾಗಲೇ ವಿವಾಹದ ಒಪ್ಪಂದಗಳು ನಡೆಯಲು ಪ್ರಾರಂಭಿಸಿದವು. ಒಬ್ಬರ ಮುಖವನ್ನು ಒಬ್ಬರು ನೋಡದೆಯೇ, ವಿವಾಹವೆಂದರೆ ಏನು ಎಂದು ಗೊತ್ತಾಗದೇ ಇರುವಂತಹ ಬಾಲಕರನ್ನು ವಿವಾಹವೆಂಬ ನೊಗಕ್ಕೆ ಕಟ್ಟಿ ಅವರ ಇಡೀ ಬದುಕನ್ನು ನರಳುವಂತಾಗಿಸಿದರು.

೧೯೨೯ರಲ್ಲಿ ಬಾಲ್ಯವಿವಾಹ ಕಾಯ್ದೆಯು ಬಾಲ್ಯವಿವಾಹ ನಿಷೇಧಿಸಿ ವಿವಾಹದ ಕನಿಷ್ಠ ವಯಸ್ಸು ಸ್ತ್ರೀಯರಿಗೆ ೧೪ ಮತ್ತು ಪುರುಷರಿಗೆ ೧೮ ಎಂದು ಕಾಯ್ದೆ ಜಾರಿಗೆ ಬಂದರೂ ಸಹ ನಿಗಧಿಪಡಿಸಿದ ವಯಸ್ಸಿಗಿಂತ ಮೊದಲೇ ವಿವಾಹಮಾಡುತ್ತಿದ್ದಾರೆ. ಹೆಣ್ಣಿನ ಜೀವನದಲ್ಲಿ ವಿವಾಹವಾಗುವುದೆ ಅವಳ ಗುರಿ ಅವಳ ದೈಹಿಕ ಬೆಳವಣಿಗೆಯಾಗದೆಯೇ ಕುಟುಂಬದವರು ಅವಳ ವಿವಾಹವನ್ನು ಮಾಡುತ್ತಿದ್ದರು. ಈ ರೀತಿ ಬಾಲ್ಯದಲ್ಲಿಯೇ ವಿವಾಹ ಮಾಡುವುದರಿಂದ ಅನೇಕ ದುಷ್ಪರಿಣಾಮಗಳು ಉಂಟಾಗತೊಡಗಿದವು.

ವಿವಾಹವಾಗಬೇಕಾದರೆ ವಿವಾಹವಾಗುತ್ತಿರುವ ಬಾಲಕ ಮತ್ತು ಬಾಲಕಿಯರ ದೇಹ ಮತ್ತು ಮನಸ್ಸುಗಳೆರಡು ಸಿದ್ಧವಿರಬೇಕು. ಆದರೆ ವಿವಾಹವಾಗುವಾಗ ವಿವಾಹವಾಗುವ ಸ್ತ್ರೀ ಪುರುಷರು ನಿರ್ಧಾರವನ್ನು ತೆಗೆದುಕೊಳ್ಳಬೇಕು. ಆದರೆ ವಿವಾಹದ ನಿರ್ಧಾರವನ್ನು ತೆಗೆದುಕೊಳ್ಳುವುದು ಕುಟುಂಬದ ವರಾಗಿರುವುದರಿಂದ ತಮ್ಮ ಹೆಣ್ಣು ಮಕ್ಕಳನ್ನು ಸಣ್ಣವಯಸ್ಸಿನಲ್ಲಿಯೇ ವಿವಾಹ ಮಾಡುತ್ತಿದ್ದಾರೆ. ಹೆಣ್ಣು ಮಕ್ಕಳನ್ನು ಹೆಚ್ಚುದಿನ ಮನೆಯಲ್ಲಿ ಇಟ್ಟುಕೊಂಡರೆ ಅವರ ಮಾನಭಂಗವಾಗುವುದು ಎಂದು ಮತ್ತು ಕನ್ಯತ್ವದ ಪರಿಶುದ್ಧತೆಯನ್ನು ಕಾಪಾಡಲು ಚಿಕ್ಕವಯಸ್ಸಿನಲ್ಲಿಯೇ ಮದುವೆ ಮಾಡಿ ತಮ್ಮ ಜವಾಬ್ದಾರಿಯನ್ನು ಗಂಡನಿಗೆ ವಹಿಸಿ ತಂದೆ-ತಾಯಿಯರು ತಮ್ಮ ಜವಾಬ್ದಾರಿಯಿಂದ ಮುಕ್ತರಾಗುತ್ತಿದ್ದರು. ಇಂದಿಗೂ ಕೂಡ ಅನೇಕ ಸಮುದಾಯಗಳಲ್ಲಿ ಹೆಣ್ಣು ಮಕ್ಕಳಿಗೆ ಅತಿ ಚಿಕ್ಕವಯಸ್ಸಿನಲ್ಲಿಯೇ ವಿವಾಹ ಮಾಡುತ್ತಿದ್ದಾರೆ. ಉತ್ತರ ಭಾರತದ ಅನೇಕ ರಾಜ್ಯಗಳಲ್ಲಿ ಈ ಪದ್ಧತಿಯು ಇದೆ. ಕರ್ನಾಟಕದಲ್ಲಿಯೂ ಸಹ ಅನೇಕ

ಬಾಲ್ಯವಿವಾಹಗಳು ನಡೆಯುತ್ತಿವೆ. ಬಾಲ್ಯದಲ್ಲಿಯೇ ವಿವಾಹವಾಗುವುದರಿಂದ ಅತಿಚಿಕ್ಕ ವಯಸ್ಸಿನಲ್ಲಿಯೇ ವಿಧವೆಯರಾಗುತ್ತಿದ್ದಾರೆ. ಈ ರೀತಿ ವಿಧವೆಯರಾಗುವುದರಿಂದ ಇವರ ಬದುಕು ತುಂಬಾ ದುಸ್ತರವಾಗಿದೆ. ಬಾಲ್ಯವಿವಾಹವಾಗುವುದರಿಂದ ಗಂಡನ ಮುಖವನ್ನೆ ಸರಿಯಾಗಿ ನೋಡದೆ ಇರುವ ಹೆಣ್ಣುಮಗಳು ವಿಧವೆಯಾಗಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಹಿಂಸೆಗೆ ಗುರಿಯಾಗಿ ಅಸಹನೀಯ ಬದುಕನ್ನು ಬದುಕಬೇಕಾದಂಥ ಸ್ಥಿತಿಬಂದಿದೆ.

ರಾಜಾರಾಮ ಮೋಹನರಾಯ್, ಮಹದೇವರಾನಡೆ ಮುಂತಾದ ಸಮಾಜ ಸುಧಾರಕರು ವಿವಾಹದ ವಯಸ್ಸನ್ನು ಏರಿಸಬೇಕೆಂದು ಹೋರಾಟವನ್ನು ಮಾಡಿದರು ಸಹ ಇಂದಿಗೂ ಹೆಣ್ಣು ಮಕ್ಕಳನ್ನು ಋತುಮತಿಯರಾಗುವ ಮೊದಲೇ ವಿವಾಹ ಮಾಡುತ್ತಿದ್ದಾರೆ. ಅಪ್ರಾಪ್ತ ವಯಸ್ಸಿನಲ್ಲಿಯೇ ಮುದುವೆಯಾಗು ವುದರಿಂದ ಎಳೆಯ ವಯಸ್ಸಿನಲ್ಲಿಯೇ ತಾಯಿಯಾಗಿ ಅವರ ಜವಾಬ್ದಾರಿಯನ್ನು ಹೊರಬೇಕಾಗಿದೆ. ಇದರಿಂದ ಅವಳು ವರ್ಷಕ್ಕೊಂದು ಮಗುವನ್ನು ಪಡೆಯುವುದರಿಂದ ಅವಳ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗಿದೆ. ರಕ್ತಹೀನತೆ, ಶಾರೀರಿಕ ದೌರ್ಬಲ್ಯ, ಪದೆಪದೇ ಗರ್ಭಿಣಿಯಾಗುವುದರಿಂದ ಮಕ್ಕಳ ಲಾಲನೆ ಪಾಲನೆಯ ಜವಾಬ್ದಾರಿ ಹೆಚ್ಚಾಗುವುದು. ಈ ಎಲ್ಲಾ ಜವಾಬ್ದಾರಿಗಳ ಜೊತೆಗೆ ಮನೆಯಲ್ಲಿ ಸ್ವಲ್ಪವು ವಿಶ್ರಾಮ ತೆಗೆದುಕೊಳ್ಳದೇ ದುಡಿಮೆ ಮಾಡುವುದು, ಅಪೌಷ್ಟಿಕವಾದ ಆಹಾರ ತೆಗೆದುಕೊಳ್ಳುವುದರಿಂದ ಮಾನಸಿಕವಾಗಿ, ದೈಹಿಕವಾಗಿ ತೊಂದರೆಗೆ ಒಳಗಾಗುತ್ತಿದ್ದಾಳೆ. ಅಪ್ರಾಪ್ತ ವಯಸ್ಸಿನಲ್ಲಿ ಗರ್ಭಿಣಿಯಾಗಿ ಮಕ್ಕಳು ಜನಿಸುವಾಗ ತಾಯಿ ಮಕ್ಕಳು ತೊಂದರೆಗೆ ಒಳಗಾಗಿ ಒಂದೊಂದು ಸಲ ಮಗುವಿನ ಜನನದ ಸಮಯದಲ್ಲಿ ತಾಯಿ ಮರಣ ಹೊಂದುವಳು. ಈ ರೀತಿಯಾಗಿ ಬಾಲ್ಯವಿವಾಹವು ಮಾಡುವುದರಿಂದ ಅನೇಕ ತೊಂದರೆಗಳು ಆಗುತ್ತವೆ. ಈ ಎಲ್ಲ ಸಮಸ್ಯೆಗಳನ್ನು ಮಹಿಳೆಯೇ ಅನುಭವಿಸುವಂತೆ ಪುರುಷನು ತನಗೆ ಅನುಕೂಲಕ್ಕೆ ತಕ್ಕಂತೆ ರಚಿಸಿದ್ದಾನೆ.

### ಬಹುಪತ್ನಿತ್ವ

ಒಬ್ಬ ಪುರುಷನು ಅನೇಕ ಸ್ತ್ರೀಯರನ್ನು ವಿವಾಹವಾಗುವುದಕ್ಕೆ ಬಹುಪತ್ನಿತ್ವ ಎನ್ನುವರು. ಜಗತ್ತಿನಾದ್ಯಂತ ಏಕ ಸಂಗಾತಿ ವಿವಾಹಕ್ಕೆ ಹೆಚ್ಚಿನ ಮನ್ನಣೆ ದೊರೆತಿದೆ. ಆದರೂ ಸಹ ಅನೇಕ ಕುಟುಂಬಗಳಲ್ಲಿ ದ್ವಿಪತ್ನಿತ್ವ ಅಥವಾ ಹಲವು ಸಂದರ್ಭಗಳಲ್ಲಿ ಇನ್ನು ಹೆಚ್ಚಿನ ಸಂಖ್ಯೆಯ ಮಹಿಳೆಯರೊಡನೆ ವೈವಾಹಿಕ ಸಂಬಂಧ ಗಳನ್ನು ಪುರುಷನು ಹೊಂದಿದ್ದಾನೆ. ಸ್ತ್ರೀ-ಪುರುಷರ ಸಮಾನತೆ ಮತ್ತು ಸ್ವಾತಂತ್ರ್ಯವನ್ನು ಕುರಿತಂತೆ ನಮ್ಮ ಸಮಾಜವು ದ್ವಿಮುಖ ಮೌಲ್ಯಗಳನ್ನು ಪ್ರತಿಪಾದಿಸುತ್ತ ಬಂದಿದೆ. ಆದುದರಿಂದಲೇ ಪುರುಷನಿಗೆ ಜೀವನದಲ್ಲಿ ಒಂದೇ ಬಾರಿ ವಿವಾಹ ಎನ್ನುವ ನಿಯಮ ಹಿಂದಿನಿಂದಲೂ ಅನ್ವಯಿಸಿಲ್ಲ ಮತ್ತು ಇಂದಿಗೂ ಅನ್ವಯಿಸುತ್ತಿಲ್ಲ. ೧೯೫೬ರಲ್ಲಿ ಹಿಂದೂ ವಿವಾಹ ಕಾಯಿದೆಯು ಜಾರಿಗೆ ಬಂದರು ಸಹ ಅನೇಕ ಪುರುಷರು

ಬಹುಪತ್ನಿತ್ವ ಪದ್ಧತಿಯನ್ನು ಅನುಸರಿಸುತ್ತಿರುವುದನ್ನು ಇಂದಿಗೂ ಕಾಣುತ್ತಿದ್ದೇವೆ. ಮೊದಲ ಪತ್ನಿಯೂ ಅಕಾಲ ಮರಣ ಹೊಂದಿದರೆ ಆಕೆಯ ತಂಗಿಯನ್ನೆ ಮದುವೆಯಾಗುತ್ತಾರೆ. ಕೆಲವೊಂದು ವೇಳೆ ಒಂದೇ ಸಮಯಕ್ಕೆ ಎಲ್ಲ ಅಕ್ಕ ತಂಗಿಯರನ್ನು ಮದುವೆಯಾಗುವ ಹಕ್ಕನ್ನು ಪುರುಷನು ಪಡೆದಿದ್ದಾನೆ. ಕೆಲವೊಂದು ಬಾರಿ ಬೇರೆ ಬೇರೆ ಕುಟುಂಬದ ಮಹಿಳೆಯರನ್ನು ಮದುವೆ ಆಗುತ್ತಾರೆ. ಇದರಿಂದ ಕುಟುಂಬದಲ್ಲಿ ಕಲಹಗಳು ಪ್ರಾರಂಭವಾಗುತ್ತವೆ. ಕೆಲವು ಕಡೆಗಳಲ್ಲಿ ಪುರುಷರು ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಮೊದಲು ಮದುವೆಯಾಗಿದ್ದರು ಸಹ ಮತ್ತೊಂದು ಮದುವೆಯಾಗುತ್ತಾರೆ. ಏಕೆಂದರೆ ಅವಳು ವರದಕ್ಷಿಣೆಯನ್ನು ತರುವುದರಿಂದ ಅವರ ಆರ್ಥಿಕಸ್ಥಿತಿ ಸುಧಾರಿಸುವುದು. ಕೃಷಿ ಪ್ರಧಾನವಾದ ಸಮಾಜಗಳಲ್ಲಿ ಪುರುಷರು ಅಧಿಕ ಸಂಖ್ಯೆಯಲ್ಲಿ ಮಹಿಳೆಯರನ್ನು ವಿವಾಹವಾಗುತ್ತಿದ್ದರು. ಕಾರಣ ಅವರನ್ನು ಕೃಷಿ ಕ್ಷೇತ್ರದಲ್ಲಿ ತೊಡಗಿಸುವುದರಿಂದ ಆರ್ಥಿಕ ಸ್ಥಿತಿಯು ಸುಧಾರಿಸಬಹುದೆಂಬ ಕಾರಣದಿಂದ ಬಹುಪತ್ನಿತ್ವಕ್ಕೆ ಮಹತ್ವ ಕೊಟ್ಟಿದ್ದಾರೆ.

ಕೆಲವು ಸಮಾಜಗಳಲ್ಲಿ ಪುರುಷರು ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಸಹ ಬಹುಪತ್ನಿಯರನ್ನು ಮಾಡಿಕೊಳ್ಳುತ್ತಿದ್ದರು. ಮೊದಲನೆಯ ಪತ್ನಿಯು ಮಕ್ಕಳನ್ನು ಪಡೆಯಲು ಅಸಮರ್ಥಳಿದ್ದ ಕಾರಣ ಅವಳೇ ಸ್ವಂತ ಗಂಡನನ್ನು ಎರಡನೆ ಮದುವೆಯಾಗುವಂತೆ ಪ್ರೇರೇಪಿಸುತ್ತಿದ್ದಳು. ಈ ರೀತಿ ಎರಡನೆ ಮದುವೆ ಮಾಡಿ ಸಂತಾನವನ್ನು ಪಡೆಯುತ್ತಿದ್ದರು. ತನ್ನ ಹೆಂಡತಿಯಿಂದ ತೃಪ್ತನಾಗದೇ ಬೇರೆ ಹೆಣ್ಣಿನ ಜೊತೆ ಸಂಬಂಧ ಬೆಳೆಸುವುದು ಬಹುಪತ್ನಿತ್ವಕ್ಕೆ ಕಾರಣವಾಗಿದೆ. ಅಲ್ಲದೆ ಹೆಂಡತಿಯು ಗರ್ಭಿಣಿಯಾಗಿದ್ದಾಗ ಅಥವಾ ಮಗುವಿಗೆ ಹಾಲೂಡೂವ ಅವಧಿಯಲ್ಲಿರುವುದರಿಂದ ಹೆಂಡತಿಯೊಡನೆ ಲೈಂಗಿಕ ಸಂಬಂಧವನ್ನು ಇಟ್ಟುಕೊಳ್ಳಲು ಆಗದ ಕಾರಣ ಬೇರೆ ಹೆಣ್ಣನ್ನು ಮದುವೆಯಾಗಿ ಮನೆಯಲ್ಲಿ ತಂದು ಇಡುತ್ತಿದ್ದರು.

ಗ್ರಾಮೀಣ ಹಾಗೂ ಆದಿವಾಸಿ ಸಮಾಜಗಳಲ್ಲಿ ಪಿತೃಪ್ರಧಾನ ಕುಟುಂಬವಿರುವುದರಿಂದ ಗಂಡು ಸಂತಾನವು ಕೌಟುಂಬಿಕ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಲು ಅವಶ್ಯಕತೆ ಇರುವುದರಿಂದ ಮೊದಲನೇ ಪತ್ನಿಯ ಹೆಣ್ಣು ಮಕ್ಕಳು ಇದ್ದರೂ ಸಹ ಗಂಡು ಸಂತಾನ ಪಡೆಯಲು ಮತ್ತೊಂದು ವಿವಾಹವಾಗುತ್ತಿದ್ದರು. ಅಲ್ಲದೆ ಕೆಲವೊಂದು ಬಾರಿ ಗಂಡು ಸಂತಾನಪಡೆಯುವವರೆಗೂ ಹಾಗೆಯೇ ಪುರುಷನು ಮದುವೆಯಾಗುತ್ತಿದ್ದನು. ಗಂಡು ಸಂತಾನ ಪಡೆಯದೇ ಇದ್ದರೆ ತಂದೆಗೆ ಸ್ವರ್ಗದ ಬಾಗಿಲು ಮುಚ್ಚಿರುತ್ತದೆ ಎಂಬ ಕಾರಣದಿಂದ ಸಹ ಪುರುಷರು ಬಹುಪತ್ನಿಯರನ್ನು ಮದುವೆ ಮಾಡಿಕೊಂಡರು. ಈ ರೀತಿ ಬಹುಪತ್ನಿಯರಿರುವುದರಿಂದ ಅನೇಕ ಕುಟುಂಬ ಕಲಹಗಳು ಉಂಟಾಗುತ್ತವೆ. ಪತಿಯು ಎಷ್ಟೇ ಜನ ಪತ್ನಿಯರನ್ನು ಪಡೆದಿದ್ದರು ಅವರೆಲ್ಲರು ಈ ಗಂಡನಿಗಾಗಿಯೇ ನಿಷ್ಠೆಯಿಂದ ಇರಬೇಕಾಗುತ್ತಿತ್ತು.

ಈ ರೀತಿಯಾಗಿ ಪುರುಷ ಪ್ರಧಾನ ಸಮಾಜವು ಪುರುಷನಿಗೆ ಎಲ್ಲಾ ರೀತಿಯ ಹಕ್ಕುಗಳನ್ನು ನೀಡಿದೆ. ಆದರೆ ಸ್ತ್ರೀಯರಿಗೆ ಮಾತ್ರ ಯಾವಾಗಲು ಪುರುಷನ ನಿಯಂತ್ರಣದಲ್ಲಿರುವಂತೆ ಮಾಡಿದೆ.

### ಲೈಂಗಿಕ ಸ್ವಾತಂತ್ರ್ಯತೆ

ಲೈಂಗಿಕತೆಯ ಸ್ವಾತಂತ್ರ್ಯವು ಪುರುಷರಿಗೆ ಮಾತ್ರ ದೊರಕಿದೆ. ಇದು ವಿವಾಹ ಎನ್ನುವ ಸಂಸ್ಥೆಯಿಂದಲೇ ಹುಟ್ಟಿದಂತಹ ಸಮಸ್ಯೆಯಾಗಿದೆ. ಅಲ್ಲದೆ ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಇರುವುದರಿಂದ ವಿವಾಹಿತ ಮಹಿಳೆಯರಿಗೆ ತುಂಬಾ ತೊಂದರೆಯಾಗುತ್ತಿದೆ. ಪುರುಷರು ಮಹಿಳೆಯರನ್ನು ಇಟ್ಟುಕೊಳ್ಳುತ್ತಾರೆ ಅಥವಾ ವೇಶ್ಯೆಯರ ಸಂಗವನ್ನು ಮಾಡುವರು. ಇವೆಲ್ಲವು ಅವರಿಗೆ ಹೆಮ್ಮೆಯಿಂದ ಹೇಳಿಕೊಳ್ಳುವಂತಹ ವಿಷಯಗಳಾಗಿವೆ. ಆದರೆ ಈ ರೀತಿ ಪುರುಷರು ಪರಸ್ತ್ರೀಯರ ಜೊತೆ ಸಂಬಂಧವನ್ನು ಇಟ್ಟುಕೊಳ್ಳುವುದರಿಂದ ಅವನ ಜೊತೆ ವಿವಾಹವಾದ ಹೆಣ್ಣು ಅನೇಕ ಬಗೆಯ ನೋವನ್ನು ಅನುಭವಿಸುತ್ತಿದ್ದಾಳೆ. ಅವಳು ಇಂಥಹ ವಿಷಯವನ್ನು ಯಾರ ಮುಂದೆಯೂ ಹೇಳಿಕೊಳ್ಳದೇ ಮಾನಸಿಕವಾಗಿ ಹಾಗೂ ದೈಹಿಕವಾಗಿ ಮಹಿಳೆ ಅನ್ಯಾಯಕ್ಕೆ ಶೋಷಣೆಗೆ ಒಳಗಾಗಿದ್ದಾಳೆ. ಪುರುಷ ಪ್ರಧಾನ ಸಮಾಜದಲ್ಲಿ ಪುರುಷನಿಗಷ್ಟೇ ಅಂದರೆ ವಿವಾಹವಾದ ಪುರುಷನು ಪರಸ್ತ್ರೀಯರ ಸಂಗವನ್ನು ಹೊಂದಬಹುದಾಗಿದೆ. ಆದರೆ ಸ್ತ್ರೀಯು ಪರಪುರುಷನ ನೆರಳು ಸಹ ನೋಡಬಾರದು. ಪುರುಷನೊಬ್ಬನೆಗೆ ತನ್ನದೇ ಆದ ರೀತಿಯಲ್ಲಿ ಲೈಂಗಿಕ ಜೀವನವನ್ನು ನಡೆಸಲು ಅವಕಾಶವಿದೆ. ಆದರೆ ಮಹಿಳೆಯು ಅನಿವಾರ್ಯ ಹಂತದಲ್ಲಿಯೂ ಸಹ ಇಂಥ ಕೆಲವೊಂದು ಘಟನೆಗಳು ಘಟಿಸಿದರೆ ಅವಳ ಬದುಕೆ ದುರಂತಮಯವಾಗುವುದು. ಸಾಮಾಜಿಕ ತಿರಸ್ಕಾರಗಳಿಗೆ ಒಳಗಾಗುತ್ತಾಳೆ. ಆಕೆಯ ಬದುಕೆಲ್ಲ ನರಕಯಾತನೆಯನ್ನು ಅನುಭವಿಸಬೇಕಾಗುತ್ತದೆ. ಕೆಲವೊಂದು ಸಲ ಆತ್ಮಹತ್ಯೆ ಮಾಡಿಕೊಳ್ಳುವಂತಹ ಪ್ರಸಂಗಗಳು ಬರುತ್ತವೆ. ಅವಳ ಲೈಂಗಿಕತೆಯ ಮೇಲೆ ಅವಳಿಗೆ ಸ್ವತಂತ್ರವಿಲ್ಲದಂತೆ ಈ ವಿವಾಹ ಸಂಸ್ಥೆಯು ವಿವಾಹದ ಮೂಲಕ ಅವಳ ಮೇಲೆ ನಿರ್ಬಂಧನೆಗಳನ್ನು ಹೇರಿದೆ.

### ವರದಕ್ಷಿಣೆ ಪದ್ಧತಿ

ವಿವಾಹ ಎನ್ನುವ ಸಂಸ್ಥೆಯ ಮೂಲಕ ಈ ವರದಕ್ಷಿಣೆಯು ಸೃಷ್ಟಿಯಾಗಿದೆ. ವಿವಾಹವಾಗಲಿರುವ ಕನ್ಯೆಯು ತನ್ನ ಗಂಡನಿಗೆ ವಿವಾಹದ ಸಮಯದಲ್ಲಿ ತೆರಬಹುದಾದ ಹಣ, ವಸ್ತುಗಳು ಮತ್ತು ಸಂಪತ್ತು ಇವುಗಳನ್ನು ವರದಕ್ಷಿಣೆ ಎನ್ನುವರು. ಪ್ರಾಚೀನ ಕಾಲದಲ್ಲಿ ಕನ್ಯೆಯ ತಂದೆಯಾದವರು ಕನ್ಯಾದಾನ ಮಾಡುವಾಗ ತನಗೆ ತಿಳಿದಮಟ್ಟಿಗೆ ತನ್ನ ಮಗಳಿಗೆ ಉಡುಗೊರೆಯ ರೂಪದಲ್ಲಿ ಚಿನ್ನ, ಹಣ, ಪಾತ್ರೆ ಇನ್ನಿತರ ವಸ್ತುಗಳನ್ನು ಕೊಡುತ್ತಿದ್ದರು. ತನಗೆ ತಿಳಿದ ಮಟ್ಟಿಗೆ ಕೊಡುವುದರಿಂದ ಇದು ಆತನಿಗೆ

ಹೊರೆ(ಭಾರ)ಎನ್ನಿಸುತ್ತಿರಲಿಲ್ಲ. ಕಾಲಾನಂತರದಲ್ಲಿ ಇದೊಂದು ಮಹಿಳೆಯರಿಗೆ ದೊಡ್ಡಸಮಸ್ಯೆಯಾಗಿ ಕಾಡಲು ಪ್ರಾರಂಭಿಸಿದೆ. ಆದ್ದರಿಂದಲೇ ಮದುವೆಯೆನ್ನುವುದು ಮಾರುಕಟ್ಟೆಯನ್ನಾಗಿ ಮಾಡಿದೆ. ಈ ವರದಕ್ಷಿಣೆ ಪದ್ಧತಿಯು ಹೇಗೆಂದರೆ ಯಾರು ಹೆಚ್ಚು ದಕ್ಷಿಣೆಯನ್ನು ಕೊಡುವರು ಅವರನ್ನು ಮದುವೆಯಾಗುವುದು. ಈ ರೀತಿ ಆಗುವುದರಿಂದ ಸಾಮಾನ್ಯ ಜನರಲ್ಲಿ ಅನೇಕ ಮಹಿಳೆಯರು ವರದಕ್ಷಿಣೆ ಕೊಡಲಾಗದ ಕಾರಣ ವಿವಾಹವಾಗದೇ ಹಾಗೆಯೇ ಉಳಿದಿದ್ದಾರೆ. ವರದಕ್ಷಿಣೆಯು ವಿವಾಹದ ಮೊದಲು, ವಿವಾಹದ ಸಮಯದಲ್ಲಿ ಮತ್ತು ವಿವಾಹದ ನಂತರವು ವರನಿಗೆ ಅಥವಾ ವರನ ಕುಟುಂಬದವರಿಗೆ ಕನ್ಯೆಯ ತಂದೆಯು ಕೊಡಬಹುದಾಗಿದೆ. ಈ ವರದಕ್ಷಿಣೆಯ ಹಣವನ್ನು ಪೂರೈಸಲು ಹೆಣ್ಣಿನ ತಂದೆ-ತಾಯಿಯರು ತಮ್ಮ ಆಸ್ತಿಯನ್ನೆ ಮಾರಿಕೊಂಡು ಮದುವೆ ಮಾಡಿಕೊಡುವಂತಹ ಪರಿಸ್ಥಿತಿ ಬಂದಿದೆ. ಮಧ್ಯಮ ವರ್ಗದವರಲ್ಲಿ ಮದುವೆಯಾಗುವುದೇ ತುಂಬಾ ತೊಂದರೆಯಾಗಿದೆ. ಒಂದು ವೇಳೆ ಮದುವೆ ಯಾದರೂ ಸಹ ವರನಕಡೆಯವರು ಕೇಳಿದ್ದನ್ನು ಕೊಡದಿದ್ದರೆ ಅವಳಿಗೆ(ಹೆಂಡತಿಗೆ) ದೈಹಿಕವಾಗಿ ಮತ್ತು ಮಾನಸಿಕವಾಗಿ ಹಿಂಸೆಯನ್ನು ನೀಡುತ್ತಿದ್ದಾರೆ. ಅವರು ಹೇಳಿದ ಸಮಯದಲ್ಲಿ ವರದಕ್ಷಿಣೆಯನ್ನು ಒಪ್ಪಿಸಲಿಲ್ಲವೆಂದರೆ ಹೆಂಡತಿಯನ್ನು ಹೊಡೆಯುವುದು, ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚುವುದು, ಆಕೆಯ ದೇಹದ ಮೇಲೆ ಗಾಯ ಮಾಡುವುದು, ವರದಕ್ಷಿಣೆ ತರುವವರೆಗೂ ತವರು ಮನೆಗೆ ಕಳುಹಿಸುವುದು, ಕೆಲವೊಂದು ಸಲ ವರದಕ್ಷಿಣೆಯ ಕಾರಣಗಳಿಂದಾಗಿ ಅನೇಕ ಮಹಿಳೆಯರ ಜೀವಂತ ಕೊಲೆ ಅಥವಾ ಆತ್ಮಹತ್ಯೆಗಳಿಗೆ ಒಳಗಾಗುತ್ತಿದ್ದಾರೆ. ಪ್ರತಿದಿನ ಕನಿಷ್ಠ ಒಂದೆರಡು ವರದಕ್ಷಿಣೆ ಸಂಬಂಧಿಸಿದ ಸಾವಿನ ಪ್ರಕರಣಗಳಾಗುತ್ತಿವೆ.

೧೯೬೧ರಲ್ಲಿ ವರದಕ್ಷಿಣೆ ನಿಷೇಧ ಕಾಯ್ದೆಯು ಜಾರಿಗೆ ಬಂದರು ಸಹ ವರದಕ್ಷಿಣೆ ತೆಗೆದುಕೊಳ್ಳುತ್ತಲೇ ಇದ್ದಾರೆ ಇದನ್ನು ತರದವರು ಸಾವಿಗೆ ಇಡಾಗುತ್ತಲೇ ಇದ್ದಾರೆ. ಈ ವರದಕ್ಷಿಣಾ ಪದ್ಧತಿಯು ಸ್ತ್ರೀಯರ ಸ್ಥಾನಮಾನವನ್ನು ತಗ್ಗಿಸುತ್ತಿದೆ. ಸ್ತ್ರೀ ಪುರುಷರಲ್ಲಿ ಸಮಾನ ಭಾವನೆಯನ್ನು ಕಿತ್ತು ಹಾಕಿ ಸ್ತ್ರೀಯರಿಗೆ ಕೀಳರಿಮೇಯ ಭಾವನೆಯನ್ನು ಮೂಡಿಸುತ್ತಿದೆ. ಇದರಿಂದ ಸ್ತ್ರೀಯರು ಸ್ವಾಭಿಮಾನದಿಂದ, ಸ್ವಗೌರವದಿಂದ ಬದುಕುವುದು ಕಷ್ಟಕರವಾಗಿದೆ. ಪುರುಷ ಪ್ರಧಾನ ಸಮಾಜವು ಮಹಿಳೆಯ ಮೇಲೆ ವರದಕ್ಷಿಣೆಯನ್ನು ಕಡ್ಡಾಯವಾಗಿ ಕೊಡುವಂತೆ ನಿಯಮಗಳನ್ನು ಹೇರಿದೆ. ವರದಕ್ಷಿಣೆ ಕೊಡದಿದ್ದರೆ ಆ ಮಹಿಳೆಗೆ ಮದುವೆಯಾಗುವುದೇ ತುಂಬಾ ತೊಂದರೆಯಾಗುತ್ತದೆ.

## ವಿವಾಹ ವಿಚ್ಛೇದನ

ವಿವಾಹವಾದ ಗಂಡು ಮತ್ತು ಹೆಣ್ಣು ಇಬ್ಬರಲ್ಲಿಯೂ ಹೊಂದಾಣಿಕೆಯ ಗುಣಗಳಿರಬೇಕು. ತಾಳ್ಮೆ ಸಾಮಾನ್ಯವಾಗಿ ಇಬ್ಬರಲ್ಲಿಯೂ ಇದ್ದರೆ ಅವಳು ಒಳ್ಳೆಯ ಜೀವನವನ್ನು ನಡೆಸಲು ಸಾಧ್ಯವಾಗುವುದು.

ಇಬ್ಬರಲ್ಲಿಯೂ ಹೊಂದಾಣಿಕೆಯ ಗುಣಗಳು ಮತ್ತು ತಾಳ್ಮೆ ಇಲ್ಲದಿದ್ದಾಗ ವಿವಾಹ ವಿಚ್ಛೇದನದಂತಹ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಗಂಡನೊಂದಿಗೆ ಹೊಂದಾಣಿಕೆ ಆಗದಂತಹ ಸಂದರ್ಭದಲ್ಲಿ ಮಹಿಳೆಯಾದವಳು ವಿಚ್ಛೇದನ ಇಚ್ಛಿಸಿದರು ಸಹ ಸಮಾಜಕ್ಕೆ ಅಂಜಿ ಅವಳು ವಿಚ್ಛೇದನವನ್ನು ಬಯಸುವುದಿಲ್ಲ. ಗಂಡನಾದವನು ಎಷ್ಟೇ ಹೊಡೆದರು, ಬಡಿದರೂ ಸಹ ಅವನ ಎಲ್ಲ ಹಿಂಸೆಗಳನ್ನು ಮತ್ತು ಅವಮಾನಗಳನ್ನು ಸಹಿಸಿಕೊಳ್ಳಬೇಕಾಗಿದೆ. ವಿಚ್ಛೇದನವು ಒಂದುವೇಳೆ ಗಂಡ ಪಡೆದರು ಸಹ ಅದರ ದೋಷವನ್ನು ಮಹಿಳೆಯ ಮೇಲೆಯೇ ಹೇರಸಲಾಗುತ್ತದೆ. ವರದಕ್ಷಿಣೆ ತಂದಿಲ್ಲ ಎನ್ನುವ ಕಾರಣದಿಂದ ಸಹ ಅನೇಕ ಪುರುಷರು ವಿಚ್ಛೇದನವನ್ನು ನೀಡಿ ಅವರು ಬೇರೆಯ ಮದುವೆಯನ್ನು ಮಾಡಿಕೊಂಡಿದ್ದಾರೆ. ನ್ಯಾಯಾಂಗದ ಕಾನೂನು ಜೀವನಾಂಶ ಪಡೆಯಲು ಮತ್ತು ಮಕ್ಕಳನ್ನು ಪೋಷಿಸಲು ಹೆಣ್ಣಿಗೆ ಸಹಾಯ ಮಾಡುವಂತಿದ್ದರೂ ಸಹ ಅವಳು ವಿವಾಹ ಎನ್ನುವ ಸಂಸ್ಥೆಯಿಂದ ಬಿಡುಗಡೆ ಪಡೆದು ಅಂದರೆ ವಿಚ್ಛೇದನೆ ಪಡೆದು ಅವಳು ಸುಖವಾಗಿ ಬಾಳಲು ಸಾಧ್ಯವಾಗುವುದಿಲ್ಲ. ಅವಳು ಸಮಾಜದ ನಿಂದನೆಗೆ ಗುರಿಯಾಗುತ್ತಾಳೆ. ಇಲ್ಲಸಲ್ಲದ ಆರೋಪಗಳನ್ನು ಹೊತ್ತು ಕೊಂಡು, ಕುಟುಂಬದಲ್ಲಿ ಎಲ್ಲರು ಅವಳದೇ ತಪ್ಪು ಎನ್ನುವ ದೃಷ್ಟಿಯಿಂದ ಕಾಣುತ್ತಾರೆ.

### ಪುನರ್ವಿವಾಹ

ಹೆಂಡತಿಯು ಸತ್ತು ಹೋಗಿ ವಿಧುರನಾದವನು ಅಥವಾ ವಿವಾಹ ವಿಚ್ಛೇದನವನ್ನು ಪಡೆದ ಪುರುಷನು ಮರುವಿವಾಹವಾಗಲು ಬಯಸುವನು. ವಿಧುರನಾದವನು ಮತ್ತು ವಿಚ್ಛೇದನೆ ಪಡೆದ ವ್ಯಕ್ತಿಯು ಕೌಟುಂಬಿಕವಾಗಿ ಸಮಸ್ಯೆಯನ್ನು ಎದುರಿಸುತ್ತಿದ್ದಾನೆ. ವಿಧುರನಾದವನು ಮಕ್ಕಳನ್ನು ನೋಡಿಕೊಂಡು ಉದ್ಯೋಗವನ್ನು ಮಾಡುವುದು ಕಷ್ಟಕರವಾದುದರಿಂದ ಆತ ಮತ್ತೆ ಮರುವಿವಾಹವಾಗುವನು. ಆತನಿಗೆ ಮರುವಿವಾಹವಾಗಲು ಕನ್ಯೆಯರು ದೊರೆಯುತ್ತಾರೆ. ಆದರೆ ಒಂದು ಹೆಣ್ಣು ವಿಚ್ಛೆದನವನ್ನು ಪಡೆದವಳಾಗಿದ್ದರೆ, ಗಂಡಸತ್ತ ವಿಧವೆಯಾಗಿದ್ದರೆ ಅವಳನ್ನು ಯಾರು ಮದುವೆಯಾಗಲು ಮುಂದೆಬರುವುದಿಲ್ಲ, ಕನ್ಯೆಯನ್ನೆ ಬಯಸುವನು. ಈ ರೀತಿಯಾಗಿ ಮರುಮದುವೆಯಾಗಲು ಪುರುಷನು ಎಲ್ಲಾ ರೀತಿಯ ಅಧಿಕಾರವನ್ನು ಹೊಂದಿದ್ದಾನೆ ಮತ್ತು ಮರುಮದುವೆಯಾಗಲು ಕನ್ಯೆಯರು ದೊರೆಯುತ್ತಾರೆ, ಮಹಿಳೆಗೆ ಮರುಮದುವೆ ಆಗಲು ಸಾಧ್ಯವೇ ಇಲ್ಲ, ಕಾರಣ ಅವಳನ್ನು ಸಮಾಜವು ಕೆಟ್ಟ ದೃಷ್ಟಿಯಿಂದ ನೋಡಲು ಪ್ರಾರಂಭಿಸುತ್ತದೆ. ಪುರುಷನು ಮರುವಿವಾಹವಾದರೆ ಆತನ ಯಾವುದೇ ರೀತಿಯ ತಪ್ಪುಗಳು ಕಂಡುಬರುವುದಿಲ್ಲ. ಹೆಣ್ಣು ಯಾವುದೇ ರೀತಿಯಿಂದ ತಪ್ಪು ಮಾಡದಿದ್ದರು ಸಹ ಅವಳು ಶಿಕ್ಷೆಗೆ ಗುರಿಯಾಗುತ್ತಿದ್ದಾಳೆ. ಈ ರೀತಿಯಾಗಿ ಅವಳಿಗೆ ಮರು ವಿವಾಹವಾಗುವ ಅವಕಾಶವಿಲ್ಲ.

## ಕೌಟುಂಬಿಕ ಹಿಂಸೆ

ಕೌಟುಂಬಿಕ ಹಿಂಸೆಯೂ ಕೂಡ ವಿವಾಹ ಕೇಂದ್ರಿತವಾದ ಸಮಸ್ಯೆಯಾಗಿದೆ. ಕುಟುಂಬದಲ್ಲಿ ಮಹಿಳೆಯರನ್ನು ಹೀಯಾಳಿಸುವುದು, ಹೊಡೆಯುವುದು, ಚುಚ್ಚು ಮಾತುಗಳನ್ನು ಆಡುವುದು ಈ ರೀತಿಯಾಗಿ ಅನೇಕ ರೀತಿಯ ಹಿಂಸೆಗಳು ಕುಟುಂಬದಲ್ಲಿ ನಡೆಯುತ್ತಿವೆ. ಈ ಎಲ್ಲ ಹಿಂಸೆಗಳನ್ನು ಅನುಭವಿಸುವವರು ಯಾರಿಗೂ ಕೂಡ ತಾವು ಕುಟುಂಬದಲ್ಲಿ ಹಿಂಸೆಯನ್ನು ಅನುಭವಿಸುತ್ತಿದ್ದೇವೆ ಎಂದು ಹೇಳುವುದಿಲ್ಲ. ಕಾರಣ "ಮನೆತನದ ಗೌರವ" ಕಾಪಾಡಿಕೊಂಡು ಹೋಗಲು ಮಹಿಳೆಯು ವಿವಾಹ ಸಂಸ್ಥೆಯ ಒಳಗಡೆಯೇ ನಡೆಯುವ ಇಂಥ ದೌರ್ಜನ್ಯಗಳು ಹೆಚ್ಚಾಗಿ ಕಾಣಿಸಿಕೊಳ್ಳದಂತೆ ಮನೆಯಲ್ಲಿಯೇ ತಾನೇ ಹಿಂಸೆಗಳನ್ನು ಅನುಭವಿಸುತ್ತಿದ್ದಾಳೆ. ಎಂತಹ ಕೆಟ್ಟ ಗಂಡನಾದರು ಅವನ ಜೊತೆ ಬಾಳುವುದು ಅನಿವಾರ್ಯವೆಂದು ತಿಳಿದು ಆತನು ಎಷ್ಟು ಹೊಡೆದರು. ಬಡಿದರು ಬಡಿಸಿಕೊಂಡು ನೋವನ್ನು ಅನುಭವಿಸಿ ಬದುಕುತ್ತಿದ್ದಾಳೆ. ಬದುಕುವುದೇ ಅಸಾಧ್ಯವೆನಿಸಿದಂತಹ ಸಂದರ್ಭಗಳಲ್ಲಿ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿದ್ದಾಳೆ ಹೊರತು ತನಗೆ ಗಂಡನಿಂದ ಹಿಂಸೆಯಾಗಿದೆ ಎಂದು ಹೇಳಿಕೊಳ್ಳುವುದಿಲ್ಲ. ವೈವಾಹಿಕ ಬದುಕಿನಲ್ಲಿ ಗಂಡನ ಹೊಡೆತದಿಂದ ಹೆಣ್ಣು ದೈಹಿಕವಾಗಿ, ಮಾನಸಿಕವಾಗಿ ಅವಳು ಹಿಂಸೆಯನ್ನು ಅನುಭವಿಸುತ್ತಿದ್ದಾಳೆ. ಗಂಡನಾದವನು ಮನೆಯ ಖರ್ಚಿಗೆಂದು ಹಣಕೊಟ್ಟರೆ ಆ ಹಣದಲ್ಲಿ ಸ್ವಲ್ಪ ಲೆಕ್ಕ ಹೆಚ್ಚು ಕಡಿಮೆ ಆದರೆ ಗಂಡನಿಂದ ಹೊಡೆತವನ್ನು ತಿನ್ನುತ್ತಾಳೆ. ಹೆಂಡತಿ ತನ್ನ ಸ್ವತ್ತು, ತಾನು ಯಜಮಾನ, ತನಗೆ ಎದುರುವಾದಿಸದೆ ಆಜ್ಞೆಯನ್ನು ಪಾಲಿಸುವುದೇ ಹೆಂಡತಿಯಾದವಳ ಕರ್ತವ್ಯ ಎನ್ನುತ್ತಿದ್ದನು. ಇಂತಹ ಪುರುಷನು ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಯಾಗುತ್ತಾನೆ.ಯಾವುದಾದರೂ ಪಾರ್ಟಿಗೆ ಹೆಂಡತಿಯನ್ನು ಕರೆದುಕೊಂಡು ಹೋಗಬೇಕಾದರು ಗಂಡ ಹೇಳಿದ ಸೀರೆಯನ್ನು ಉಟ್ಟುಕೊಂಡು ಆತ ಹೇಳಿದ ಹಾಗೆಯೇ ಶೃಂಗಾರ ಮಾಡಿಕೊಂಡು ಹೋದರು, ಪಾರ್ಟಿಯಲ್ಲಿ ಕುಳಿತದ್ದಕ್ಕೆ, ನಿಂತಿದ್ದಕ್ಕೆ ತಪ್ಪು ಹುಡುಕಿ ಮನೆಗೆ ಬಂದ ತಕ್ಷಣ ಹೆಂಡಿತಿಯನ್ನು ಹೀಯಾಳಿಸುವುದು ಅವರ ಕೆಲಸವಾಗಿದೆ.

ಕೌಟುಂಬಿಕ ಕ್ರೌರ್ಯವು ಅನೇಕ ಹೆಣ್ಣುಮಕ್ಕಳ ಪ್ರಾಣವನ್ನೆ ತೆಗೆಯುವಂತಹದಾಗಿದೆ. ಹೆಣ್ಣಿನ ಜೀವವೆಷ್ಟು ಅಗ್ಗವಾಗಿದೆ ಅಂದರೆ ಅವಳ ಜೀವವನ್ನು ತೆಗೆಯಲು ಅಡುಗೆ ಸಹ ಕಾರಣವಾಗುತ್ತದೆ. ಗಂಡನ ಸಿಟ್ಟು ಕೊಪ ಇವುಗಳನ್ನು ನಮ್ಮ ಸಮಾಜವು ಪೌರುಷದ ಚಿಹ್ನೆ ಆಗಿ ಬೆಳೆಸಿ ಘೋಷಿಸುತ್ತದೆ. ಆದರೆ ಹೆಣ್ಣಿಗೆ ಸಹನೆ, ತಾಳ್ಮೇ, ಕರುಣೆಯಿಂದ ಕೂಡಿರಬೇಕೆಂದು ಹೇಳುತ್ತದೆ ಸಮಾಜ. ಆದರೆ ಗಂಡಿನ ಸಿಟ್ಟನ್ನು ಪರೋಕ್ಷವಾಗಿ ಪ್ರೋತ್ಸಾಹಿಸುತ್ತಲಿದೆ. ಆದ್ದುದರಿಂದ ಆತನು ತನ್ನ ಹೆಂಡತಿಗೆ ಬೇಕಾದ ಹಾಗೆ ಹಿಂಸೆಯನ್ನು ನೀಡುತ್ತಿದ್ದಾನೆ. ಈ ರೀತಿ ಹಿಂಸೆಗೆ ಒಳಗಾಗಿದ್ದ ಮಹಿಳೆಯು ಆತನಿಗೆ ವಿರೋಧಿಸುವ, ಪ್ರತಿಭಟಿಸುವ ಸಾಮರ್ಥ್ಯವಿದ್ದರೂ ಸಹ ಅವಳು ಪ್ರತಿಭಟಿಸದಂತೆ ಇರಲು ಪತಿಯೇ ಪರದೈವ ಎಂಬ

ಭಾವನೆಯನ್ನು ಮೂಡಿಸಿದ್ದಾರೆ. ಪತಿಯನ್ನು ಅನುಸರಿಸಿದರೆ ಮಾತ್ರ ಸಾಮಾಜಿಕ ಮನ್ನಣೆ ದೊರೆಯುವುದು ಅಲ್ಲದೆ ಸಮಾಜದಲ್ಲಿ ಗೌರವವು ಹೆಚ್ಚಿಸುವುದು ಎನ್ನುವ ಭಾವನೆಗೊಳಗಾಗುವ ಹಾಗೆ ಮಾಡಿದ್ದಾರೆ. ಒಂದು ವೇಳೆ ಅವನಿಗೆ ಎದುರುತ್ತರ ಕೊಟ್ಟು ತವರು ಮನೆಗೆ ಹೋದರೆ ಆ ತವರು ಮನೆಯವರು ಅವಳನ್ನು ಶಾಶ್ವತವಾಗಿ ಇಟ್ಟುಕೊಳ್ಳುವುದಿಲ್ಲ, ಆದ ಕಾರಣ ಅವಳು ಕುಟುಂಬದಲ್ಲಿ ಎಷ್ಟೇ ಕಷ್ಟ ಅನುಭವಿಸಿದರು ಅದಕ್ಕೆ ಹೊಂದಿಕೊಂಡೇ ಹೋಗಬೇಕಾಗಿದೆ.

**ಸತಿಪದ್ಧತಿ**

೧೮೨೯ರಲ್ಲಿ ಲಾರ್ಡ್‌ವಿಲಿಯಂ ಬೆಂಟಿಕ್‌ನ ಆಡಳಿತದ ಕಾಲದಲ್ಲಿ ಸತಿ ಪದ್ಧತಿಯನ್ನು ನಿಷೇಧಿಸಿದ್ದರು ಸಹ ಸತಿಪದ್ಧತಿಯೂ ಸಂಪೂರ್ಣವಾಗಿ ನಾಶವಾಗಿಲ್ಲ. ಈ ಸತಿಪದ್ಧತಿಯನ್ನು ಹೋಗಲಾಡಿಸಲು ರಾಜಾರಾಮ ಮೋಹನ್‌ರಾಯ್‌ರು ಸತಿಪದ್ಧತಿಯನ್ನು ನಿಷೇಧಿಸಬೇಕೆಂದು ಹೋರಾಡಿದರು. ಗಂಡನ ಮರಣದ ನಂತರ ಪತ್ನಿಯು ಸ್ವಇಚ್ಛೆಯಿಂದ ಮರಣ ಹೊಂದುವುದಕ್ಕೆ ಸತಿ ಎನ್ನುವರು. ಈ ರೀತಿ ಗಂಡನೊಡನೆ ಚಿತೆಗೇರಿದರೆ ಸ್ವರ್ಗಪ್ರಾಪ್ತಿಯಾಗುತ್ತದೆ ಎಂದು ಪುರುಷ ಚಿಂತನೆಯು ಸ್ವತಃ ಮಹಿಳೆಯರೇ ಸತಿಹೋಗಲು ಒಪ್ಪಿಕೊಳ್ಳುವಂತೆ ಮಾಡಿದೆ. ಇದು ಪಾತಿವ್ರತ್ಯದ ವೈಭವೀಕರಣದಿಂದಾಗಿ ಈ ಪದ್ಧತಿಯು ಪ್ರಾರಂಭವಾಗಿದೆ. ಸ್ತ್ರೀಯು ಪಾತಿವ್ರತ್ಯದ ಉನ್ನತ ಹಂತವನ್ನು ಮುಟ್ಟಿದಾಗ ಸಹಜವಾಗಿಯೇ ಅವಳ ಶೀಲಕ್ಕೆ ಬೆಲೆ ಬಂದಿತು. ಆದ್ದರಿಂದ 'ಶೂಲಕ್ಕೇರಿದರು ಶೀಲ ಕಳೆದುಕೊಳ್ಳಬಾರದು' ಎನ್ನುವ ಮಾತನ್ನು ಆದರ್ಶವಾಗಿಟ್ಟುಕೊಂಡು ಪತಿಯ ಮರಣದ ನಂತರ ಪರ ಪುರುಷರಿಂದ ತನ್ನ ಮೇಲೆ ಆಕ್ರಮಣವಾಗಿ ತನ್ನ ಮಾನ ಹೋಗುವುದು ಎನ್ನುವ ಕಾರಣದಿಂದ ಸತಿ ಹೋಗುವುದನ್ನು ಸ್ತ್ರೀಯಾದವಳು ಒಪ್ಪಿಕೊಂಡಳು.

ಪುರುಷನಾದವನು ತನ್ನ ಪತ್ನಿಯನ್ನು ತನ್ನ ಆಸ್ತಿ ಎಂದು ತಿಳಿದು ತಾನು ಮರಣ ಹೊಂದಿದಾಗ ತನ್ನ ಜೊತೆಯಲ್ಲಿಯೇ ಮರಣ ಹೊಂದಬೇಕೆಂದು ಯುದ್ಧಕ್ಕೆ ಹೋಗುವಾಗ ಭಾಷೆಯನ್ನು ತೆಗೆದುಕೊಂಡು ತಾನು ಸತ್ತನಂತರ ಹೆಂಡತಿಯಾದವಳು ತನಗೆ ನಿಷ್ಠಳಾಗಿದ್ದು ತನ್ನ ಪತಿಯ ಮರಣದಲ್ಲಿಯೂ ಸಹ ಸತಿಯಾದವಳು ಅಗಲಬಾರದೆಂಬ ಸ್ವಾರ್ಥ ಭಾವನೆಯಿಂದ ಸತಿ ಹೋಗುವಂತೆ ಸ್ವತಃ ಪುರುಷರೆ ಮಹಿಳೆಯನ್ನು ಒಪ್ಪಿಸುತ್ತಿದ್ದರು. ಅಲ್ಲದೆ ಸತ್ತ ಗಂಡನ ಜೊತೆ ಚಿತೆ ಏರುವುದರಿಂದ ಅವಳ ಪಾಲಿಗೆ ನೀಡಬೇಕಾದ ಆಸ್ತಿಯನ್ನು ಪುರುಷನಾದವನು ತಾನೇ ಪಡೆಯುತ್ತಿದ್ದನು. ಆ ಆಸ್ತಿಯನ್ನು ಎರಡು ಬಗೆಯಲ್ಲಿ ಪಡೆಯುತ್ತಿದ್ದನು. ಸತಿ ಹೋಗುವಾಗ ತನ್ನ ಬೆಲೆ ಬಾಳುವ ಆಭರಣಗಳನ್ನು ಹಂಚುವಂತೆ ಮಾಡಿ ಸಂಪತ್ತನ್ನು ಪಡೆದರೆ, ಮಕ್ಕಳಿಲ್ಲದವರು ಸತಿ ಹೋಗುವುದರಿಂದ ಅವರ ಪಾಲಿನ ಆಸ್ತಿಯನ್ನು ಪುರುಷವರ್ಗದವರು ಪಡೆಯುತ್ತಿದ್ದರು. ಪತ್ನಿಯರಲ್ಲಿ ಪರಲೋಕದ ಕಲ್ಪನೆಯನ್ನು ಮೂಡಿಸಿ ಅವಳಿಗೆ ಸತಿ ಹೋಗಲು ಒಪ್ಪಿಗೆ ಇಲ್ಲದಿದ್ದರೂ ಬಲವಂತವಾಗಿ ಚಿತೆಯಲ್ಲಿ ತಳ್ಳುತ್ತಿದ್ದರು. ಸ್ತ್ರೀಗೆ ಪತಿ ಇದ್ದರೆ

ಅವಳನ್ನು ಸೌಭಾಗ್ಯವತಿ ಎಂದು ಗೌರವಿಸುತ್ತಾರೆ. ಈ ಒಂದು ಕಾರಣದಿಂದಲೇ ಅವಳಿಗೆ ತಾಳಿ, ಮೂಗುತಿ, ಕಾಲುಂಗುರ, ಓಲೆ, ಬಳೆ, ಕುಂಕುಮ ಇವೆಲ್ಲವು ಸೌಭಾಗ್ಯದ ಸಂಕೇತಗಳಾಗಿವೆ. ಗಂಡನಿದ್ದರೆ ಮಾತ್ರ ಇವೆಲ್ಲವು ಅವಳು ಧರಿಸಬಹುದಾಗಿತ್ತು. ಅಲ್ಲದೆ ಮಧ್ಯಯುಗದಲ್ಲಿ ಗಂಡ ಸತ್ತ ಮೇಲೆ ಪತ್ನಿಯಾದವಳಿಗೆ ಕೇಶಮುಂಡನವನ್ನು ಮಾಡುತ್ತಿದ್ದರು. ಒಂದೊತ್ತು ಊಟಮಾಡಿ ಅವಳು ತನ್ನ ಇಡೀ ಜೀವನವನ್ನು ಕಷ್ಟದಲ್ಲಿಯೇ ಕಳೆಯಬೇಕಾಗಿತ್ತು. ಇಂಥ ಕ್ರೂರ ಜೀವನವನ್ನು ನಡೆಸಲು ಸಾಧ್ಯವಾಗದೇ ಮುತ್ತೈದೆತನವು ಅಖಂಡವಾಗಿರಲೆಂದು ಸತಿ ಹೋಗುತ್ತಿದ್ದರು.

ಪುರುಷ ಪ್ರಧಾನ ಸಮಾಜದಲ್ಲಿ ಧರ್ಮಗಳನ್ನು ಪುರುಷರು ತಮಗೆ ಅನುಕೂಲವಾಗುವ ರೀತಿಯಲ್ಲಿ ನಿರ್ಮಿಸಿದ್ದಾರೆ. ಆದುದರಿಂದಲೇ ಧರ್ಮಗಳು ಸದಾ ಪುರುಷರ ಹೀತವನ್ನೇ ಬಯಸುವುದರಿಂದ ಮಹಿಳೆಯು ಬದುಕಬೇಕೆನ್ನುವ ಬಯಕೆ, ಸ್ವಾತಂತ್ರ್ಯತೆಯನ್ನು ಕಳೆದುಕೊಂಡಿದ್ದಾಳೆ. ಪಾತಿವ್ರತ್ಯಕ್ಕೆ ಹೆಚ್ಚು ಒತ್ತುಕೊಡಲಾಗಿದೆ, ನಮ್ಮ ಸಮಾಜದಲ್ಲಿ ಗಂಡನಿದ್ದರೆ ಮಾತ್ರ ಅವಳಿಗೆ ಸಮಾಜದಲ್ಲಿ ಸ್ಥಾನ, ಗಂಡನಿಲ್ಲದಿದ್ದರೆ ಅವಳಿಗೆ ಸಮಾಜದಲ್ಲಿ ಸ್ಥಾನವಿಲ್ಲದೆ ತುಂಬಾ ಕಠಿಣವಾದ ಜೀವನವನ್ನು ನಡೆಸಬೇಕಾದಂತಹ ಪರಿಸ್ಥಿತಿಯನ್ನು ಪುರುಷ ಪ್ರಧಾನ ಸಮಾಜ ಅವಳ ಮೇಲೆ ನಿಯಂತ್ರಣವನ್ನು ಹೇರಲಾಗಿದೆ.

ಸಹಗಮನ ಅಥವಾ ಸತಿಪದ್ಧತಿಯು ತುಂಬಾ ಪ್ರಾಚೀನ ಕಾಲದಿಂದಲೇ ಭಾರತದಲ್ಲಿದೆ. ಮಹಾಭಾರತದ ಕಾಲದಲ್ಲಿ ಮಾದ್ರಿಯು ಪಾಂಡುವಿನ ಜೊತೆ ಚಿತೆ ಏರಿದಳು. ಈ ರೀತಿ ಗಂಡನ ಜೊತೆ ಚಿತೆ ಏರುವುದು ಪ್ರತಿಷ್ಠೆಯಾಗಿ ಪರಿಣಮಿಸಿದೆ. ಮೀತಾಕ್ಷರ ಗ್ರಂಥದಲ್ಲಿ "ಸತಿ ಹೋಗುವವಳ ಸಮಸ್ತ ಕುಲಗಳು, ತಂದೆಯ ಕುಲ, ತಾಯಿಯ ಕುಲ, ಪತಿಯ ಕುಲದವರು ಸ್ವರ್ಗದಲ್ಲಿ ನಲಿಯುತ್ತಾರೆ. ಇದು ಆತ್ಮಹತ್ಯೆಯಲ್ಲ, ಮೋಕ್ಷದ ವಿಧಾನ"ವೆಂದು ಸ್ಮೃತಿಕಾರರು ಮಹಿಳೆಯರನ್ನು ಸತಿಹೋಗುವಂತೆ ಪ್ರೇರೇಪಿಸಿದ್ದಾರೆ. "ಗಂಡ ಸತ್ತಾಗ ಸಾವನ್ನು ಎದುರಿಸುವವಳೇ ನಿಜವಾದ ಪತಿವ್ರತೆ" ಎಂದು ಮಹಿಳೆಯರ ಮುಂದೆ ಈ ಆದರ್ಶವನ್ನು ಇಟ್ಟಿದ್ದಾರೆ. ವಿವಾಹ ಸಂಸ್ಥೆಯ ಮೂಲಕ ಅಸಮಾನ ನೆಲೆಯಿಂದ ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ವಿವಾಹಿತ ಮಹಿಳೆಯು ಅನೇಕ ಕಷ್ಟಗಳನ್ನು, ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ.

### ವೈಧವ್ಯ

ಗಂಡನಿರುವ ವಿವಾಹಿತ ಮಹಿಳೆಯರೇ ಅನೇಕ ರೀತಿಯಿಂದ ತೊಂದರೆಗಳನ್ನು ಅನುಭವಿಸುತ್ತಿದ್ದರೆ ಗಂಡನನ್ನು ಕಳೆದುಕೊಂಡ ವಿಧವೆಯರ ಜೀವನ ತುಂಬಾ ಚಿಂತಾಜನಕವಾಗಿದೆ. ವಿಧವೆಯರನ್ನು

ಸಮಾಜದಲ್ಲಿ ಅಮಂಗಲೆ ಎಂದು ಕಂಡು ಅವರನ್ನು ಯಾವುದೇ ಧಾರ್ಮಿಕ ಕಾರ್ಯಗಳಲ್ಲಿ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸುವ ಅಧಿಕಾರದಿಂದ ಅವಳು ವಂಚಿತಳಾಗಿದ್ದಾಳೆ. ಆದರೆ ಸುಮಂಗಲೆಯರಿಗೆ ಸಾಮಾಜಿಕ ಬದುಕಿನಲ್ಲಿ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಅವಳಿಗೆ ಎಲ್ಲಿಲ್ಲದ ಪ್ರಾಶಸ್ತ್ಯ ದೊರೆಯುತ್ತಲಿದೆ. ಆದುದರಿಂದ ಅವಳು ಯಾವುದೇ ಕಾರ್ಯಗಳಲ್ಲಿ ಯಾರ ಭಯವಿಲ್ಲದೆ ಭಾಗವಹಿಸಬಹುದಾಗಿದೆ. ಮುತ್ತೈದೆಯಾದವು ಯಾವುದೇ ಧಾರ್ಮಿಕ ಕಾರ್ಯದಲ್ಲಿ ಭಾಗವಹಿಸಿದರೆ ಅವಳಿಗೆ ಅರಿಶಿಣ, ಕುಂಕುಮ, ಹಸಿರು ಬಳೆ ನೀಡಿ ಸ್ವಾಗತವನ್ನು ಕೋರುತ್ತಾರೆ. ಸಮಾಜದಲ್ಲಿ ಏನೆಲ್ಲ ಆಚರಣೆಗಳಿದ್ದರು ಸುಮಂಗಲಿಯರು ಶ್ರೇಷ್ಠ ಎಂದು ತಿಳಿದು ಮುತ್ತೈದೆತನಕ್ಕೆ ಇಷ್ಟೆಲ್ಲ ಪ್ರಾಮುಖ್ಯತೆ ಕೊಟ್ಟಿದ್ದಾರೆ. ಆದರೆ ವಿಧವೆಯರು ಅಷ್ಟೇ ಹೀನಾಯವಾಗಿ ಸಮಾಜದಲ್ಲಿ ಬದುಕುತ್ತಿದ್ದಾರೆ. ಆದುದರಿಂದಲೇ ವೈಧವ್ಯ ಜೀವನವು ಒಂದು ರೀತಿಯ ಶಾಪವಾಗಿ ಕಂಡಿದೆ. ಗಂಡ ಸತ್ತಮೇಲೆ ಗಂಡನ ಮನೆಯಲ್ಲೂ ಮತ್ತು ಆಕೆಯ ತೌರು ಮನೆಯಲ್ಲಿಯೂ ಆಶ್ರಯ ದೊರಕುವುದಿಲ್ಲ. ಒಂದು ವೇಳೆ ಆಶ್ರಯ ದೊರಕಿದರು. ಅವರೆಲ್ಲರು ಅವಳನ್ನು ಅನುಕಂಪದಿಂದ ನೋಡಿಕೊಳ್ಳುತ್ತಾರೆಯೇ ಹೊರತು ಈ ಮನೆಯಲ್ಲಿ ಅವಳು ಸ್ವತಂತ್ರವಾಗಿ ಬದುಕುವ ಹಕ್ಕಿದೆ ಎಂಬುದನ್ನೆ ಮರೆತು ಬಿಡುತ್ತಾರೆ.

ವೈಧಿಕರಲ್ಲಿ ಗಂಡ ಸತ್ತ ನಂತರ ತಲೆ ಬೋಳಸಿಕೊಂಡು ಒಡವೆ ವಸ್ತ್ರಗಳನ್ನು ಹಾಕಿಕೊಳ್ಳದೇ ತನ್ನ ಎಲ್ಲ ಸುಖಸಂತೋಷಗಳಿಂದ ದೂರವಾಗಿದ್ದು ಮನೆಯಲ್ಲಿ ಜೀತದ ಆಳಿನಂತೆ ದುಡಿದು ಕಾಲಕಳೆಯ ಬೇಕಾಗಿದೆ. ವಿಧವೆಯಾದ ಮಹಿಳೆಗೆ ಮನೆಯವರೆ ಅಂದರೆ ಮೈದುನ, ಭಾವಂದಿರೆ ಅವಳ ಶಾರೀರಿಕ ಹಿಂಸೆಗೆ ಕಾರಣರಾಗುವರು. ಅತ್ತೆ ಮಾವಂದಿರು, ನಾದಿನಿಯರು, ನೆಗೆಣ್ಣಿಯರು ಅವಳಿಗೆ ಮಾನಸಿಕವಾಗಿ ಮತ್ತು ಚುಚ್ಚು ಮಾತುಗಳನ್ನು ಆಡಿ ಅವಳು ಜೀವನವೀಡಿ ಕಿರುಕುಳ ಅನುಭವಿಸುವಂತಾಗಿದೆ. ಈ ರೀತಿಯಾಗಿ ಮನೆಯವರು ಮಾನಸಿಕವಾಗಿ ಮತ್ತು ದೈಹಿಕವಾಗಿ ಅವಳಿಗೆ ಹಿಂಸೆಯನ್ನು ನೀಡುವುದರ ಜೊತೆಗೆ ಅವಳ ಪಾಲಿಗೆ ಬರಬೇಕಾದ ಆಸ್ತಿಯಲ್ಲಿ ಸಹ ಹಕ್ಕನ್ನು ಕೊಡುವುದಿಲ್ಲ, ಕಾರಣ ಅವಳು ವಿಧವೆಯಾಗಿರುವುದರಿಂದ ಅವಳಿಗೆ ಯಾವುದೇ ರೀತಿಯ ರಕ್ಷಣೆ ಇರದ ಕಾರಣ ಮನೆಯವರಿಂದಲೇ ಶೋಷಣೆಗೆ ಗುರಿಯಾಗುತ್ತಿದ್ದಾಳೆ. ವಯಸ್ಸಾದ ವಿಧವೆಯಂತು ಮಕ್ಕಳಿಂದ, ಸೊಸೆಯಿಂದ ಬೈಸಿಕೊಳ್ಳುವುದು ಮತ್ತು ತಿರಸ್ಕಾರಕ್ಕೆ ಒಳಗಾಗುತ್ತಿದ್ದಾಳೆ. ವಿಧವೆಯರಲ್ಲಿ ಯುವ ವಿಧವೆಯರು ಅಧಿಕವಾಗಿ ಶೋಷಣೆ, ಕಿರುಕುಳಕ್ಕೆ, ಹಿಂಸೆಗೆ ಗುರಿಯಾಗುತ್ತಿದ್ದಾಳೆ. ಆದುದರಿಂದಲೇ ವೈಧವ್ಯದ ಬದುಕು ಬಹಳ ಸಂಕಷ್ಟಮಯವಾಗಿವೆ. ಇವರಿಗೆ ಯಾವುದೇ ರೀತಿಯ ಸವಲತ್ತುಗಳು ದೊರೆಯದಂತಾಗಿದೆ. ವಿಧುರರು ಸಹಜವಾಗಿ ಮರುಮದುವೆಯಾಗುತ್ತಾರೆ. ಆದರೆ ವಿಧವೆಯರು ಸಹಜವಾಗಿ ಮರುಮದುವೆಯಾಗಲು ಒಪ್ಪುವುದಿಲ್ಲ. ಕಾರಣ ಶೀಲ, ಪಾತಿವ್ರತ್ಯ, ಏಕಪತಿತ್ವದ ಕಲ್ಪನೆಯಿಂದ ಮತ್ತು ಸಂಸ್ಕೃತಿಯ

ಹಿನ್ನೆಲೆಯಲ್ಲಿ, ಮರುಮದುವೆಯಾಗುವುದು ಕಾನೂನಿನಿಂದ ಸಾಧ್ಯವಿದ್ದರು, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಮಾನಸಿಕವಾಗಿ ಅವಳು ಅಡ್ಡಿ ಆತಂಕಗಳನ್ನು ಅನುಭವಿಸುತ್ತಿದ್ದಾಳೆ.

ಭಾರತದ ಬಹುತೇಕ ಸಮುದಾಯಗಳಲ್ಲಿ ವಿಧವೆಯಾದವಳು ಸಾಂಸ್ಕೃತಿಕ ಹೀನಾಯಕ್ಕೆ ಒಳಗಾಗಿದ್ದಾಳೆ. ಉಚ್ಚ ಜಾತಿಯ ಹಿಂದೂಗಳಲ್ಲಿ ವಿಧವೆಯರು ಅಮಂಗಳಕಾರಿಗಳು, ಪೂರ್ವಜನ್ಮದಲ್ಲಿ ಮಾಡಿದ ಪಾಪಗಳಿಗೆ ಇಲ್ಲಿ ಶಿಕ್ಷೆ ಅನುಬವಿಸುತ್ತಾರೆ. ಪತಿಯನ್ನು ಕಳೆದುಕೊಂಡು ಅಪೂರ್ಣವ್ಯಕ್ತಿಗಳು ಎಂಬ ನಂಬಿಕೆ ತುಂಬಾ ಪ್ರಬಲವಾಗಿದೆ. ವೈದಿಕರಲ್ಲಿ ಸಣ್ಣ ವಯಸ್ಸಿಗೆ ವಿಧವೆಯರಾದರೂ ಕೇಶ ಮುಂಡನ ಮಾಡಿಕೊಂಡು ಒಪ್ಪತ್ತು ಊಟ ಮಾಡಿ, ರವಿಕೆ ಇಲ್ಲದೆ ಮಡಿ ಹೆಂಗಸಿನ ಬದುಕು ಸಾಗಿಸಬೇಕಾಗಿದೆ. ಬಿಳಿಯ ಸೀರೆಯುಟ್ಟು ಹಳೆಯ ಸೀರೆಗಳನ್ನು ಹಾಸಿ ಹೊದ್ದುಕೊಂಡು ಮನೆಯವರಿಗೆಲ್ಲ ರುಚಿ-ರುಚಿಯಾದ ಅಡುಗೆ ಮಾಡಿ ತಾವು ಮಾತ್ರ ಒಪ್ಪತ್ತು ಮಾತ್ರ ಊಟ ಮಾಡಿ ಸದಾ ಜಪತಪ ಪೂಜೆಯನ್ನು ಮಾಡುತ್ತ ಬತ್ತಿಯನ್ನು ಹೊಸೆಯುತ್ತ ಜೀವನವನ್ನು ಕಳೆಯಬೇಕಾಗಿದೆ. ಇಷ್ಟೆಲ್ಲ ಕೆಲಸಗಳನ್ನು ಮಾಡಿದ ಈಕೆಯ ಮುಖವನ್ನು ನೋಡಿದರೆ ಅಮಂಗಲ, ಅಪಶಕುನ ಎಂದು ತಿಳಿದು ಕೆಲವೊಂದು ಬಾರಿ ಅವಳನ್ನು ಮನೆಯಿಂದ ಹೊರಗಟ್ಟುತ್ತಿದ್ದರು. ಪುರುಷರ ಶೀಲಕ್ಕೆ ಕಟ್ಟುಪಾಡಿಲ್ಲದೆ ಸಮಾಜದಲ್ಲಿ ಸುಲಭವಾಗಿ ಲೈಂಗಿಕ ಬಲಿಪಶುಗಳಾಗುತ್ತಿದ್ದಾರೆ. ವಿಧವೆಯರು ಎರಡು ರೊಟ್ಟಿಯ ಊಟಕ್ಕೆ ಇಡೀ ದಿನ ಅವರು ಭಜನೆಯನ್ನು ಮಾಡುತ್ತ ಕಾಲ ಕಳೆಯಬೇಕಾಗಿದೆ. ಮದುವೆಗೆ ಮೊದಲು ತಿಂದುಂಡು, ಒಡವೆ ವಸ್ತ್ರ, ಕುಂಕುಮ, ಬಳೆ, ಹೂ ಎಲ್ಲವುಗಳನ್ನು ಹಾಕಿಕೊಂಡವಳು ಗಂಡ ಸತ್ತೊಡನೆ ಎಲ್ಲ ತೊರೆಯಬೇಕಾಗಿದೆ. ಶತ ಶತಮಾನಗಳಿಂದ ಅಮಂಗಲೆ ಎನ್ನುವ ಪಟ್ಟಿಯನ್ನು ಸಾಯುವವರೆಗೂ ಕಟ್ಟಿಕೊಳ್ಳುವ ಸ್ಥಿತಿ ಬಂದೊದಗಿದೆ. ಕೆಲವು ಕೆಳಜಾತಿಗಳಲ್ಲಿ ವಿಧವೆಯರಿಗೆ ಮರುವಿವಾಹವಾಗುವುದರಿಂದ ಅವರು ಅಷ್ಟೊಂದು ತೊಂದರೆಯನ್ನು ಅನುಭವಿಸುವುದಿಲ್ಲ. ಆದರೆ ಉಚ್ಚಜಾತಿಗಳಲ್ಲಿ ವಿವಾಹವಾಗುವುದು ತುಂಬಾ ಕಷ್ಟಕರವಾಗಿದೆ. ಈ ರೀತಿ ಹಲವಾರು ಸಂಕೋಲೆಗಳಲ್ಲಿ ಮಹಿಳೆ ಇರುವಾಗ ಸಂಕೋಲೆಗಳು ಬಿಡಿಸಿ ಕೊಳ್ಳಲು ಕೆಲವು ಅವಕಾಶಗಳು ದೊರೆತಾಗ ಸ್ತ್ರೀಯರ ಜೀವನದಲ್ಲಿ ಕೆಲವು ಬದಲಾವಣೆಗಳನ್ನು ಕಂಡುಕೊಳ್ಳಬಹುದಾಗಿದೆ.

ಹೀಗೆ ಈ ಮೇಲಿನ ಎಲ್ಲಾ ಅಂಶಗಳನ್ನು ಕುಲಂಕುಶವಾಗಿ ಅಭ್ಯಾಸಿಸಲು ಮತ್ತು ಅವುಗಳಿಂದ ಮಹಿಳೆಯರ ಮೇಲೆ ಅಥವಾ ವಿಧವೆಯರ ಮೇಲೆ ಆಗುತ್ತಿರುವ ದುಷ್ಪರಿಣಾಮಗಳೇನು ಎನ್ನುವುದನ್ನು ಅರಿತುಕೊಳ್ಳಲು ಮತ್ತು ಪರಿಹಾರ ಕಂಡುಕೊಳ್ಳುವುದು ಹೇಗೆ ಎನ್ನುವುದನ್ನು ಈ ಸಂಪ್ರಬಂದದಲ್ಲಿ ಅಳವಡಿಸಿಕೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ

ಭಾರತ ದೇಶದಲ್ಲಿ ಅಂಧಕಾರವೆಂಬುದು ಅಲ್ಲಲ್ಲಿ ಕಂಡುಬರುವುದು ನೋಡಬಹುದು. ಭಾರತವು ಧರ್ಮವನ್ನು ಆಚರಿಸುವಲ್ಲಿ ಪ್ರಮುಖವಾದ ಸ್ಥಾನವಿದೆಯೆಂದರೆ ತಪ್ಪಾಗಲಿಕ್ಕಿಲ್ಲ. ಇದರಲ್ಲಿ ಭಾರತೀಯ ಎರಡನೇ ಪ್ರಜೆಯೆಂದು ಪರಿಗಣಿಸುವ ಮಹಿಳೆಯರ ಜೀವನ ಅದರಲ್ಲೂ ವಿಧವೆಯರ ಜೀವನ ಯಾವ ರೀತಿಯಲ್ಲಿದೆ ಎಂಬುವುದನ್ನು ನೋಡುವುದು ಅಧ್ಯಯನದ ಮಹತ್ವದ ವಿಷಯವಾಗಿದೆ. ಭಾರತದಲ್ಲಿ ವಿವಾಹವು ಪವಿತ್ರವಾದ ಸ್ಥಾನಪಡೆದಿದೆ. ಆದರೆ ಕೊನೆಯವರೆಗೂ ಪವಿತ್ರ ಕಲ್ಪನೆ ಕೆಲವರಲ್ಲಿರಬಹುದು ಕೆಲವರಲ್ಲಿ ಇರಲಿಕ್ಕಿಲ್ಲ ಒಂದು ವೇಳೆ ಇಬ್ಬರಲ್ಲಿ ಒಬ್ಬರು ಸತ್ತರೆ ಅವರು ವಿಧುರ ಅಥವಾ ವಿಧವೆಯಾಗಿರಲು ಸಮಾಜ ನಿರ್ಮಿಸಿಕೊಟ್ಟಂತಹ ಒಂದು ಕಟ್ಟುಪಾಡು, ವಿಧವೆಯಾದ ಮಹಿಳೆಯರಿಗೆ ಭಾರತದಲ್ಲಿ ಪವಿತ್ರವಾದ ಸ್ಥಾನದಿಂದ ಕೆಳಗಿಳಿಸಿ ಅವಳ ನಿಕೃಷ್ಟ ಜೀವನಕ್ಕೆ ತಳ್ಳುವಂತಹ ಈ ಪುರುಷ ಪ್ರಧಾನ ಸಮಾಜ ಅವಳ ಮೇಲೆ ನಿರ್ಬಂಧನೆಗಳನ್ನು ಹೇರಿದೆ.

ವಿಧವೆಯರಿಗೆ ಕುಂಕುಮ, ಹಸಿರುಬಳೆ, ಹೂ, ಕಾಲುಂಗುರಗಳೇ ಮುತ್ತೈದೆ ಲಕ್ಷಣಗಳು ಯಾಕಾದವು ಮತ್ತು ವಿವಾಹದ ಮೊದಲು ಆಕೆ ಆಭರಣ ಕುಂಕುಮಗಳನ್ನು ಬಳಸುತ್ತಿದ್ದರು ಗಂಡ ಸತ್ತಕೂಡಲೆ ಈ ಹಕ್ಕನ್ನು ಕಳೆದುಕೊಳ್ಳುವಂತಹ ಸ್ಥಿತಿಗೆ ಯಾಕೆ ತಲುಪುತ್ತಾರೆಂಬುವುದು ಮಹಿಳಾ ಅಧ್ಯಯನಕಾರರ ಜಟಿಲ ಸಮಸ್ಯೆಯಾಗಿ ಇಂದಿಗೂ ಬಗೆಹರಿಯದ ಸಮಸ್ಯೆಯಾಗಿ ಉಳಿದಿದೆ. ಗ್ರಾಮೀಣ ಪ್ರದೇಶಗಳಲ್ಲಿ ವಿಧವೆಯರ ಗೋಳು ಅವರ ನಿರಂತರ ಶೋಷಣೆ ಅವರಿಗೆ ಕೊಡುವಂತಹ ಮಾನಸಿಕ ಹಿಂಸೆ, ಕುಟುಂಬದ ವ್ಯವಸ್ಥೆಯಲ್ಲಿ ಹೀನಾಯವಾಗಿ ಕಾಣುವುದು, ಪವಿತ್ರ ಕಾರ್ಯಕ್ರಮಗಳಿಂದ ದೂರತಳ್ಳುವುದು, ಅವರು ಮರುಮದುವೆಯಾಗದೆ ಹೀನಾಯವಾದ ಬದುಕನ್ನು ನಡೆಸಲು ಪಾತಿವ್ರತ್ಯದ ವೈಭವೀಕರಣವು ಸಮಾಜದಲ್ಲಿ ಗಾಢವಾದ ಪರಿಣಾಮಬೀರಿದೆ. ಅಲ್ಲದೆ ಅವರು ಪತಿಯನ್ನು ಕಳೆದುಕೊಂಡ ನಂತರ ಆರ್ಥಿಕತೆಯ ಸ್ವಾತಂತ್ರ್ಯ ಕಳೆದುಕೊಳ್ಳುವರು, ಇದರಿಂದ ಅವರು ಬದುಕುವುದೇ ಕಷ್ಟಕರವಾಗುವುದು, ಇನ್ನೊಬ್ಬರ ಮೇಲೆ ಅವಲಂಬಿಸಿ ಜೀವನವನ್ನು ನಡೆಸುವಂತಹ ಪರಿಸ್ಥಿತಿ ಬರುವುದು. ಪತಿಯ ಮರಣದ ನಂತರ ಆತನ ಆಸ್ತಿಯಲ್ಲಿ ಹಕ್ಕನ್ನು ಸಹ ನೀಡದೆ ಅವಳ ವಂಶದ ಮೇಲೆ ಅವಳ ಹಕ್ಕನ್ನು ಕಿತ್ತುಕೊಳ್ಳುವರು. ಪುತ್ರ ಸಂತಾನವಿದ್ದರಂತು ಆ ಮಗುವಿನ ಮೇಲೆ ಇವಳು ಯಾವುದೇ ರೀತಿಯಿಂದ ಅಧಿಕಾರವನ್ನು ಚಲಾಯಿಸದಂತೆ ಮಾಡಲಾಗಿದೆ. ಆ ಮಗು ಗಂಡನ ಮನೆಯ ಆಸ್ತಿ ಆಗುವುದು. ಪಾತಿವ್ರತ್ಯದ ಕಲ್ಪನೆಯಿಂದ ವಿಧವೆಯಾದವಳಿಗೆ ಮರುವಿವಾಹವಾಗದಂತೆ ಅವಳು ವಿಧವೆಯಾಗಿಯೇ ಒಪ್ಪತ್ತಿನ ಊಟಕ್ಕೂ ಬೇರೆಯವರ ಮೇಲೆ ಅವಲಂಬಿತವಾಗಿ ಜೀವನವನ್ನು ನಡೆಸುವಂತೆ ಮಾಡಲಾಗಿದೆ. ಈ ರೀತಿಯಾಗಿ ಅವಳಿಗೆ ಎಲ್ಲಾ ಹಕ್ಕುಗಳಿಂದ ವಂಚಿತಳನ್ನಾಗಿ ಮಾಡಲಾಗಿದೆ. ವಿಧವೆಯಾದವಳು ಇತ್ತಿಚಿಗೆ

ಆಸ್ತಿಯ ಹಕ್ಕು ಜಾರಿಗೆ ತಂದರೂ ಕೂಡ ಮಹಿಳೆಯರಿಗೆ ಆಸ್ತಿ ಸಿಗುವುದು ಅಪರೂಪ. ಇತ್ಯಾದಿ ಸಮಸ್ಯೆಗಳ ನೋವನ್ನು ಅನುಸರಿಸಿಕೊಂಡು ಬರುವ ಮಹಿಳೆಯರ ಜೀವನವನ್ನು ಸ್ತ್ರೀವಾದಿ ನೆಲೆಯಲ್ಲಿ ನೋಡುವುದೆ ಪ್ರಮುಖ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಈ ಅಧ್ಯಯನ ಕಾರ್ಯಕ್ಷೇತ್ರದ ವ್ಯಾಪ್ತಿಯು ಗುಲಬರ್ಗಾ ಜಿಲ್ಲೆಯ ಗ್ರಾಮಾಂತರ ಪ್ರದೇಶ ಹಾಗೂ ನಗರ ಪ್ರದೇಶಗಳಲ್ಲಿ ಅಧ್ಯಯನವನ್ನು ಕೈಗೊಂಡಿದ್ದೇನೆ. ಬಾಲವಿಧವೆಯರು ಮತ್ತು ಮಧ್ಯವಯಸ್ಸಿನ ಹಾಗೂ ವೃದ್ಧ ವಿಧವೆಯರ ಅಂಶಿಕ ಮಾದರಿಗಾಗಿ ವಿಚಾರಗಳನ್ನು ಬಳಸಿಕೊಳ್ಳಲಾಗಿದೆ. ಗ್ರಾಮೀಣ ಪ್ರದೇಶಗಳನ್ನು ಅವಲೋಕಿಸಿ ಎಲ್ಲ ವಯಸ್ಸಿಗೆ ಸಂಬಂಧಿಸಿದವರನ್ನು ಆಧಾರವಾಗಿಟ್ಟುಕೊಂಡು ಸಮಾಜಶಾಸ್ತ್ರ, ಮನಶಾಸ್ತ್ರಕ್ಕೆ ಸಂಬಂಧಿಸಿದ ಮಾನಸಿಕ ತುಮುಲಗಳನ್ನು ಹಾಗೂ ಸಮಾಜದ ಅಂಶಗಳು ಈ ಅಧ್ಯಯನಕ್ಕೆ ಬಳಸಿಕೊಂಡಿದೆ.

ಪುರಷ ಪ್ರಧಾನ ಸಮಾಜದಲ್ಲಿ ವಿಧವೆಯರ ಮೇಲೆ ಹೇರಿರುವ ಸಮಾಜದ ನಿರ್ಬಂಧನೆಗಳು, ನಿಷೇಧಗಳು ಮತ್ತು ತಾರತಮ್ಯಗಳನ್ನು ಗುರುತಿಸಲಾಗಿದೆ. ವಿಧವೆಯ ಕೌಟುಂಬಿಕ ಸಮಸ್ಯೆಗಳು ಬಾಲ್ಯದಲ್ಲಿ ವಿಧವೆಯಾಗುವುದರಿಂದ ಅವಳು ಯಾವ ರೀತಿ ಶೋಷಣೆಗೆ ಒಳಗಾಗುತ್ತಿದ್ದಾಳೆ ಎಂದು, ಅವಳು ಮರುಮದುವೆಯಾಗದಂತೆ ಸಮಾಜ ಅವಳ ಮೇಲೆ ಹೇರಿರುವ ನಿರ್ಬಂಧಗಳ ಜೊತೆಗೆ ಇನ್ನು ಕೆಲವು ಜೀವನದ ಮೂಲಘಟ್ಟಗಳನ್ನು ತೆಗೆದುಕೊಳ್ಳಲಾಗಿದೆ. ಇವೆಲ್ಲವುಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ.

## ಅಧ್ಯಯನದ ಮಹತ್ವ

ಭಾರತೀಯ ಸಮಾಜದ ನೈತಿಕತೆಯನ್ನು ಕಾಪಾಡುವವರು ಮಹಿಳೆಯರೆಂದು ಪುರುಷವರ್ಗ ತುಟಿಮಾತಿನ ಮೂಲಕ ವೈಭವಿಕರಿಸುವುದು ಒಂದು ಕಡೆ ಇದ್ದರೆ, ಇನ್ನೊಂದು ಕಡೆ ನಮ್ಮ ಸಮಾಜದಲ್ಲಿ ವೈವಾಹಿಕ ಸ್ಥಾನದ ದೃಷ್ಟಿಯಿಂದ ವಿಧವೆಯರೆಂದು ಗುರುತಿಸಲ್ಪಡುವ ಮಹಿಳೆಯರನ್ನು ಹೀನಾಯ ಸ್ಥಿತಿಗೆ ತಳ್ಳುವವರೇ ಪುರುಷ ವರ್ಗವೆಂದು ಹೇಳುವುದರಲ್ಲಿ ಸಂದೇಹವಿಲ್ಲ.

ಸಾಮಾಜಿಕವಾಗಿ ಬಹಿಷ್ಕೃತರಾದ ಈ ವಿಧವೆಯರು ಜನರ ಮನಸ್ಸಿನಿಂದಲೂ ಅಥವಾ ವಿಧವೆಯರ ಬಗೆಗಿನ ಸಾಮಾಜಿಕ ಚರ್ಚೆಗಳಿಂದ ಹೊರಗಾಗಿದ್ದು, ಅವರ ಬಾಳು ಯಾವ ನೆಲೆಯಲ್ಲಿ ಜೀವಿಸುತ್ತಾರೆಂಬುದು ಮಹತ್ವದ ವಿಷಯವೆಂದು ಪರಿಗಣಿಸಬಹುದು.

ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ವಿಧವೆಯಾದಂತಹ ಮಹಿಳೆಯರ ಬಗ್ಗೆ ಕುಟುಂಬ ಮತ್ತು ಸಮಾಜ ಅವರನ್ನು ಯಾವ ನೆಲೆಯಲ್ಲಿ ಪರಿಗಣಿಸುತ್ತದೆ. ಲಿಂಗತಾರತಮ್ಯದಿಂದ ಕೂಡಿದ ಸಮಾಜ ವಿಧವೆಯರ ಜೀವನಕ್ಕೆ ಆಧಾರಗಳೇನು, ಅವರ ಪಾಡುಗಳೇನು, ಕಟ್ಟುಪಾಡುಗಳಾದ ಸಂಪ್ರದಾಯ, ಧರ್ಮ ಆಚರಣೆಗಳಲ್ಲಿ ಅವರಿಗೆ ಯಾವ ಸ್ಥಾನವಿದೆ ಮತ್ತು ಸಮುದಾಯ ನೋಡುವಂತಹ ದೃಷ್ಟಿ ಯಾವುದು ಮತ್ತು ನಿರಂತರ ಶೋಷಣೆಗಳು ಯಾವುವು ಎಂಬುದನ್ನು ಅಧ್ಯಯನದ ಮಹತ್ವದಲ್ಲಿ ಪರಿಗಣಿಸಿ ಅಸಮಾನತೆಯ ನೆಲೆಯ ಬಗ್ಗೆ ವಿಧವೆಯರಿಗೆ ಗಮನಹರಿಸುವಂತೆ ತಿಳುವಳಿಕೆ ಕೊಡುವುದು ಅವರ ಸಮಸ್ಯೆಗಳ ಸುಳಿ ಯಾವುದು ಎಂದು ಅರಿತುಕೊಳ್ಳುವುದರಲ್ಲಿ ಈ ಅಧ್ಯಯನ ಹೊಸದಾದ ಮಹತ್ವ ಪಡೆಯುತ್ತದೆ.

ಮಾನವನು ಸಮಾಜದ ಸದಸ್ಯನಲ್ಲದೆ ಸಂಘಜೀವಿಯಾಗಿರುವುದರಿಂದ ಸದಾಕಾಲ ಸಮಾಜದಲ್ಲಿ ವಾಸಿಸುತ್ತಾನೆ. ಮಾನವರು ಹುಟ್ಟಿನಿಂದಲೇ ಸಮಾಜ ಜೀವಿಯಾಗಿರುವುದಿಲ್ಲ ಆದರೆ ಬೆಳೆಯುತ್ತಾ ಸಮಾಜ ಜೀವಿಯಾಗುತ್ತಾರೆ. ಆದುದರಿಂದಲೇ ಮಾನವನು ಸುಸಂಸ್ಕೃತ ಜೀವನದ ಚೌಕಟ್ಟಿನಲ್ಲಿ ಬದುಕಲು ಸಾಮಾಜೀಕರಣ ನಿರಂತರವಾಗಿ ಶ್ರಮಿಸುತ್ತದೆ. ಅದು ಸಮಾಜದಲ್ಲಿ ಅನೇಕ ಗುಣಗಳನ್ನು ತರಬೇತಿಗಳನ್ನು ಮತ್ತು ಅನುಭವಗಳನ್ನು ಪಡೆಯುವುದೇ ಸಾಮಾಜೀಕರಣದಿಂದ, ಸಾಮಾಜೀಕರಣದ ಬಗ್ಗೆ ಹಲವಾರು ಸಮಾಜ ಶಾಸ್ತ್ರಜ್ಞರು ವ್ಯಾಖ್ಯಾನಗಳನ್ನು ನೀಡಿದ್ದಾರೆ. "ಅದರಲ್ಲಿ ಅಗ್ಬರ್ನ ಅವರು ಹೀಗೆ ಹೇಳಿದ್ದಾರೆ. 'ವ್ಯಕ್ತಿ ಸಾಮೂಹಿಕ ಕಟ್ಟಳೆಗಳಿಗೆ ಹೊಂದಿಕೊಳ್ಳುವುದನ್ನು ಕಲಿಯುವ ಪ್ರಕ್ರಿಯೇ ಸಾಮಾಜೀಕರಣ ಎಂದಿದ್ದಾರೆ. ಅಲ್ಲದೆ ಲುಂಡಬರ್ಗ ಅವರ ಪ್ರಕಾರ 'ಸಾಮಾಜಿಕ ಸಮೂಹಗಳು ಮತ್ತು ಸಮುದಾಯಗಳಲ್ಲಿ ಪರಿಣಾಮಕಾರಿಯಾಗಿ ಪಾತ್ರವಹಿಸಲು ಅಗತ್ಯವಾದ ಹವ್ಯಾಸಗಳು ನಂಬಿಕೆಗಳು, ಕೌಶಲ್ಯಗಳು ಮತ್ತು ಸರಿತಪ್ಪುಗಳ ನಿರ್ಣಯಗಳನ್ನು ವ್ಯಕ್ತಿಯು ಕಲಿತುಕೊಳ್ಳಲು ನೆರವಾಗುವ ಸಂಕೀರ್ಣಮಯವಾದ ಅಂತ ಕ್ರೀಯೆಯ ಪ್ರಕ್ರೀಯೆಗಳನ್ನು ಒಳಗೊಂಡಿರುವುದೇ ಸಾಮಾಜೀಕರಣ"[6] ಎಂದಿದ್ದಾರೆ.

ಶೈಶವಾಸ್ಥೆಯಲ್ಲಿ ಮಗುವಿಗೆ ಬುದ್ಧಿಶಕ್ತಿ ಮತ್ತು ವಾಕಶಕ್ತಿ ಬೆಳೆದಿರುವುದಿಲ್ಲ. ಆದರೆ ಕಾಲಕ್ರಮೇಣವಾಗಿ ಮಗುವಿನಲ್ಲಿ ಬದಲಾವಣೆಗಳು ಕಂಡುಬರುವುದು ಪ್ರಾರಂಭವಾಗುತ್ತದೆ. ಬುದ್ಧಿ ತಿಳಿದಂತೆಲ್ಲ ಮಗುವು ಸಮಾಜದಲ್ಲಿರುವ ವ್ಯಕ್ತಿಗಳ ಜೊತೆ ಸಂಪರ್ಕ ಬೆಳೆಸಿಕೊಂಡು ಬರುತ್ತದೆ. ಆಗ ಒಬ್ಬರಿಗೊಬ್ಬರು ಹೇಗೆ ಸಹಾಯಕಾರಿಯಾಗಿ ಬಾಳಬೇಕು. ಸಮಾಜದೊಂದಿಗೆ ಹೇಗೆ ಜೀವಿಸಬೇಕು. ಗುರುಹಿರಿಯರಿಗೆ ಹೇಗೆ ಗೌರವಿಸಬೇಕು. ಒಳ್ಳೆಯ ಕೆಟ್ಟ ಕೆಲಸಗಳು ಯಾವುದು ಎನ್ನುವ ಕಟ್ಟುಪಾಡುಗಳನ್ನು ಚಿಕ್ಕಮಕ್ಕಳಿರುವುದ ರಿಂದಲೇ ರೂಢಿಸಲಾಗುತ್ತದೆ. ಸಾಮಾಜೀಕರಣವು ಒಂದು ನಿಧಾನವಾದ ಮತ್ತು ನಿರಂತರವಾದ ಪ್ರಕ್ರಿಯೆಯಾಗಿದೆ. ಇದು ಮಾನವನು ಹುಟ್ಟುದಾಗಿನಿಂದ ಸಾಯುವವರೆಗೆ ಸದಾ ಕಾರ್ಯಗತವಾಗಿರುತ್ತದೆ. ವ್ಯಕ್ತಿಯ ಭವಿಷ್ಯವನ್ನು ನಿರೂಪಿಸುವಲ್ಲಿ ಕುಟುಂಬದಲ್ಲಿಯ ಸಾಮಾಜೀಕರಣವು ಬಹಳ ಪ್ರಮುಖವಾದ ಪಾತ್ರವಹಿಸುತ್ತದೆ. ಸಾಮಾಜೀಕರಣದ ಮೂಲಕ ಪ್ರತಿಯೊಬ್ಬ ವ್ಯಕ್ತಿಯೂ ಎಲ್ಲಾ ಮಾನವೀಯ ಗುಣಗಳನ್ನು ಮತ್ತು ಸಾಮಾಜಿಕ ಮೌಲ್ಯಗಳನ್ನು ಪಡೆಯುತ್ತಾನೆ. ಎಳೆಯ ವಯಸ್ಸಿನಲ್ಲಿಯೇ ಮಗುವಿಗೆ ಸಾಮಾಜೀಕರಣದ ತರಬೇತಿ ನೀಡದೆ ಇದ್ದರೆ ಸಮಾಜ ಮತ್ತು ದೇಶ ಅಪಾರ ಪ್ರಮಾಣದ ನಷ್ಟವನ್ನು ಎದುರಿಸಬೇಕಾಗುತ್ತದೆ. ಆದುದರಿಂದಲೇ, ಕುಟುಂಬದಲ್ಲಿ ತಂದೆ ತಾಯಿಗಳು ಮತ್ತು ಜೊತೆಯಲ್ಲಿ

ವಾಸಿಸುವ ಇತರ ಸದಸ್ಯರಿಂದ ಮಗ ಯಾವ ನಡತೆಗಳು ಕುಟುಂಬದವರು ನಿರೀಕ್ಷಿಸುವರೋ ಅದನ್ನು ಕಲಿಯುತ್ತದೆ. ಜೊತೆಗೆ ಸುತ್ತಮುತ್ತಲಿನ ವಾತಾವರಣ ಮನೆಯ ವಾತಾವರಣ ಎರಡನ್ನು ರೂಢಿಸಿಕೊಂಡು ನಿಯಮಬದ್ಧವಾಗಿ ಪ್ರತಿಕ್ರಿಯಿಸುತ್ತದೆ.

ವ್ಯಕ್ತಿಯು ಬೆಳೆಯುತ್ತ ಹೋದಹಾಗೆಲ್ಲ ಅವರು ಸಾಮಾಜೀಕರಣಕ್ಕೆ ಒಳಗಾಗಲೇ ಬೇಕಾಗುತ್ತದೆ. ನಾವು ಪ್ರತಿಕ್ರಿಯಿಸುವ ರೀತಿ, ಜೀವನಶೈಲಿ, ಆಗುಹೋಗುಗಳು, ಬೇಕು ಬೇಡಗಳನ್ನು ಕುಟುಂಬದಿಂದ, ಶಾಲೆ ಗೆಳೆಯರಿಂದ ಕಲಿಯುತ್ತಾರೆ. ಆದುದರಿಂದ ಮಾನವ ಜೀವಿಯನ್ನು ಮನುಷ್ಯತ್ವದ ಮೌಲ್ಯದ ಕಡೆಗೆ ಒಯ್ಯಲು ಸಾಮಾಜೀಕರಣದ ಪಾತ್ರ ಪ್ರಮುಖವಾಗಿದೆ. ಸಾಮಾಜೀಕರಣವು ವ್ಯಕ್ತಿಯ ಜೀವನದ ಪ್ರಮುಖ ಪ್ರಕ್ರಿಯೇ ಇಲ್ಲದೆ ವ್ಯಕ್ತಿಯು ಸಂಪೂರ್ಣ ವ್ಯಕ್ತಿತ್ವಗಳನ್ನು ಬೆಳೆಸಿಕೊಳ್ಳಲಾರ. ಆದುದರಿಂದ ಸಾಮಾಜೀಕರಣದ ಪ್ರಾಮುಖ್ಯತೆ ತುಂಬಾ ಅಗತ್ಯವಾಗಿದೆ.

"ಹುಟ್ಟಿದಾಗ ಮಾನವನು ಮೂಳೆ ಮಾಂಸವುಳ್ಳ ಪ್ರಾಣಿ, ಇಂತಹ ಪ್ರಾಣಿಯಲ್ಲಿ ವ್ಯಕ್ತಿತ್ವವನ್ನು ರೂಪಿಸಿ, ಮಾನವೀಯತೆ, ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳನ್ನು ಬೆಳೆಸಿ ಸಮಾಜ ಜೀವಿಯನ್ನಾಗಿಸುತ್ತದೆ. ಅಲ್ಲದೆ ವ್ಯಕ್ತಿತ್ವವನ್ನು ಅರಳಿಸುತ್ತದೆ. ಸಾಮಾಜೀಕರಣದ ಮೂಲಧ್ಯೆಯ ವ್ಯಕ್ತಿತ್ವ ವನ್ನು ರೂಪಿಸುವುದು. ಮಾನವನ ವ್ಯಕ್ತಿತ್ವವು ಅರಳುವುದು ಸಾಮಾಜೀಕರಣದಿಂದ ಸಮಾಜದ ಸಮೂಹದ ಸದಸ್ಯರಾಗಿ ಮಾತ್ರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಸಾಧ್ಯ. ಸಾಮಾಜೀಕರಣವು ವ್ಯಕ್ತಿತ್ವ ರೂಪಗೊಳ್ಳಲು ಅವಶ್ಯಕವಾದ ಸನ್ನಿವೇಶ ಮತ್ತು ಪರಿಸ್ಥಿತಿಯನ್ನು ಒದಗಿಸುತ್ತದೆ. ಮಾನವ ಶಿಶುವು ಒಂದು ರೂಪವಿಲ್ಲದ ಒರಟು ಕಲ್ಲಿದ್ದಂತೆ, ಆ ಕಲ್ಲನ್ನು ಶಿಲ್ಪಿ ಕೆತ್ತಿ ಸುಂದರ ವಿಗ್ರಹವನ್ನಾಗಿ ಮಾಡುತ್ತಾನೆ. ಅಂತೆಯೇ ಶಿಶುವನ್ನು ಕೆತ್ತಿ ಮಾನವನನ್ನಾಗಿ ಸಾಮಾಜೀಕರಣವು ಮಾಡಿದೆ. ಸಾಮಾಜೀಕರಣದಿಂದ ವ್ಯಕ್ತಿಯು ನಿಯಮಬದ್ದ, ಸಮಾಜಬದ್ಧರಾಗಿ ಶಿಸ್ತುಗಾರನಾಗುತ್ತಾನೆ. ಸಾಮಾಜೀಕರಣವು ಸಾಮಾಜಿಕ ಕಲಿಯುವಿಕೆಯನ್ನಾಧರಿಸಿದೆ. ಸಾಮಾಜಿಕ ಕಲಿಯುವಿಕೆಯಿಂದ ವ್ಯಕ್ತಿಯ ನಡತೆಯ ನಿಯಮಗಳು, ಮೌಲ್ಯಗಳು, ಆದರ್ಶಗಳು, ಜೀವನದ ಗುರಿಗಳನ್ನು ಮತ್ತು ಅವುಗಳನ್ನು ಹೊಂದುವ ಮಾರ್ಗಗಳನ್ನು ಪಡೆಯುತ್ತಾರೆ. ಸಾಮಾಜೀಕರಣಗೊಂಡ ವ್ಯಕ್ತಿಯು ಸಮಾಜದ ನಿರೀಕ್ಷೆಗನುಗುಣವಾಗಿ ವರ್ತಿಸುವುದರಿಂದ ಶಿಸ್ತನ್ನು ಪಾಲಿಸುತ್ತಾನೆ. ಸಮಾಜದಲ್ಲಿ ವ್ಯಕ್ತಿಯು ವಿವಿಧ ಪಾತ್ರಗಳನ್ನು ನಿರ್ವಹಿಸಬೇಕು. ಪಾತ್ರ ನಿರ್ವಹಣೆಗೆ ಶಿಸ್ತು, ಸಂಯಮ, ಸಾಮರ್ಥ್ಯ, ಸಂಸ್ಕೃತಿ, ತರಬೇತಿ, ಶಿಕ್ಷಣ, ಇವೆಲ್ಲವನ್ನು ವ್ಯಕ್ತಿಯೂ ಸಾಮಾಜೀಕರಣದಿಂದ ಪಡೆಯುತ್ತಾನೆ. ಆದುದರಿಂದ ಯಶಸ್ವಿಯಾಗಿ ಪಾತ್ರನಿರ್ವಹಿಸುತ್ತಾರೆ. ಸಾಮಾಜೀಕರಣವು ಮಗುವಿನಲ್ಲಿರುವ ಕುಶಲತೆಯನ್ನು ವೃದ್ಧಿಸಿ ತನ್ನ ಜೀವನದ ವಿವಿಧ ಪಾತ್ರಗಳನ್ನು ಯಶಸ್ವಿಯಾಗಿ ನಿರ್ವಹಿಸುವಂತೆ ಸಾಮರ್ಥ್ಯವನ್ನು ನೀಡುತ್ತದೆ. ಸಾಮಾಜಿಕ ಪರಂಪರೆಯು ಮುಂದಿನ

ಪೀಳಿಗೆಯವರ ಜೀವನಕ್ಕೆ ದಾರಿದೀಪವಿದ್ದಂತೆ. ಆದ್ದರಿಂದ ಸಾಮಾಜೀಕರಣವು ಸಾಮಾಜಿಕ ಕ್ರಮ ಮತ್ತು ಸಾಮಾಜಿಕ ಸುಭದ್ರತೆಯನ್ನು ಕಾಪಾಡುತ್ತದೆ. ಸಂಸ್ಕೃತಿ ಮತ್ತು ಸಾಮಾಜೀಕರಣವು ಒಂದಕ್ಕೊಂದು ಪೂರಕವಾಗಿವೆ. ಸಾಮಾಜೀಕರಣದಿಂದ ಸಾಂಸ್ಕೃತಿಕ ಅಂಶಗಳು ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸಲ್ಪಟ್ಟು ಸಂಸ್ಕೃತಿಯು ನಿರಂತರವಾಗಿ ಮುಂದುವರಿಯುವಂತೆ ಮಾಡುತ್ತದೆ. ಸಾಮಾಜೀಕರಣದಿಂದ ಸಾಮಾಜಿಕ ಪರಂಪರೆಯು ಉಳಿದುಬೆಳೆಯುತ್ತದೆ."[೨]

ಸಾಮಾಜೀಕರಣದ ಕಾರ್ಯದಲ್ಲಿ ಕುಟುಂಬ, ಶಿಕ್ಷಣ, ಸಂಸ್ಕೃತಿ, ಧಾರ್ಮಿಕ ಸಂಸ್ಥೆಗಳು ಪ್ರಮುಖವಾದ ಪಾತ್ರವಹಿಸುತ್ತದೆ. ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಕುಟುಂಬದ ಪಾತ್ರ ತುಂಬಾ ದೊಡ್ಡದಾಗಿದೆ. ಶಿಶುವು ಹುಟ್ಟಿದಾಗಿನಿಂದ ಕೆಲವು ಕಾಲದವರೆಗೆ ಪರಾವಲಂಬಿಯಾಗಿರುತ್ತದೆ. ತನ್ನ ಲಾಲನೆ, ಪಾಲನೆ, ತರಬೇತಿಗಳಿಗೆ ಹಿರಿಯರನ್ನು ಅವಲಂಬಿಸಿದೆ. ಕುಟುಂಬವು ಸಮಾಜದ ಕೇಂದ್ರಬಿಂದು ಮತ್ತು ಸಾಮಾಜೀಕರಣದ ಪ್ರಮುಖ ಅಂಗ. ತಂದೆ-ತಾಯಿಗಳು ಮಕ್ಕಳ ಕೇಂದ್ರ ವ್ಯಕ್ತಿಗಳು, ಕಿರಿಯರಾದವರು ಹಿರಿಯರನ್ನು ಗೌರವಿಸಬೇಕು, ಅವರು ಹೇಳಿದ್ದನ್ನು ಕೇಳಬೇಕು. ಮಗುವಿಗೆ ಆಚಾರ, ಸಂಪ್ರದಾಯ, ನೀತಿ ನಿಯಮಗಳನ್ನು ಪರಿಚಯಿಸಿ ಮುಂದೆ ಸಮಾಜದಲ್ಲಿ ಹೊಂದಿಕೊಂಡು ಬಾಳುವ ಹಾಗೆ ಕುಟುಂಬದಲ್ಲಿ ಹಿರಿಯರ ಮೂಲಕ ಮಗು ಕಲಿಯುತ್ತದೆ. ಮಗುವಿನ ಸಮಾನ ವಯಸ್ಕರಾದ ಸ್ನೇಹಿತರು, ಸಹಪಾಠಿಗಳು, ಜೊತೆಗಾರರು ಸಾಮಾಜೀಕರಣದಲ್ಲಿ ಸಹಾಯಕರಾಗುತ್ತಾರೆ. ಇಲ್ಲಿ ಅಧಿಕಾರ ಮತ್ತು ನಿಯಂತ್ರಣದ ಬದಲು ಸರಸ, ಸ್ನೇಹವಿರುತ್ತದೆ. ಮಕ್ಕಳು ಅಭ್ಯಾಸ, ಆಟ, ಚಟಗಳು, ಲೋಕರೂಢಿಗಳನ್ನು ಸಮಾನ ವಯಸ್ಕರಿಂದ ಕಲಿಯುತ್ತಾರೆ. ಮಗುವು ಕುಟುಂಬದಲ್ಲಿ ಜೀವನಕ್ರಮ, ನಡವಳಿಕೆ, ಮಾತೃಭಾಷೆ, ಸಂಭಾಷಣೆ ಮೊದಲಾದುವನ್ನು ಕಲಿಯುತ್ತಾರೆ. ಕುಟುಂಬವು ಸಂಪ್ರದಾಯ ಮತ್ತು ನೈತಿಕ ನಿಯಮಗಳ ಹಿಡಿತದಲ್ಲಿಡಲಾಗುತ್ತದೆ. ಅಲ್ಲದೆ ವಿವಾಹ ಪೂರ್ವ ಮತ್ತು ವಿವಾಹದ ಹೊರಗಿನ ಲೈಂಗಿಕ ಸಂಬಂಧವನ್ನು ಸಹಿಸುವುದಿಲ್ಲ. ವೈವಾಹಿಕ ಜೀವನದ ಜವಾಬ್ದಾರಿಗಳನ್ನು ಪೂರೈಸಲು ಯುವಕ ಯುವತಿಯರನ್ನು ಸಿದ್ಧಗೊಳಿಸುತ್ತದೆ.

ತಾಯಿಯು ಸಾಮಾಜೀಕರಣದ ಶಿಲ್ಪ ಆದುದರಿಂದಲೇ ಮಾತೃಪ್ರೇಮವು ತಾಯಿ ಮಗುವನ್ನು ಅತಿ ನಿಕಟವಾಗಿ ಬೆಸೆಯುತ್ತದೆ. ಎದೆಯ ಹಾಲುಣಿಸುವಿಕೆಯಿಂದ ಇವರಿಬ್ಬರ ನಡುವೆ ಶಾಶ್ವಾತ ಪ್ರೇಮವನ್ನು ಮೂಡಿಸುತ್ತದೆ. ಮಗುವಿನ ವ್ಯಕ್ತಿತ್ವವು ಸಂಪೂರ್ಣವಾಗಿ ಬೆಳೆಯಲು ಉತ್ತಮ ಕೌಟುಂಬಿಕ ಪರಿಸರ ಮತ್ತು ಆತನ ಶಾರೀರಿಕ ಮಾನಸಿಕ ಶಕ್ತಿಗಳನ್ನು ಅವಲಂಬಿಸಿದೆ. ಕುಟುಂಬದಲ್ಲಿ ಮಗು ಹೇಗೆ ಬೆಳೆದಿರುವುದು ಹಾಗೆಯೇ ಸಮಾಜದಲ್ಲಿ ವರ್ತಿಸುತ್ತದೆ. ಕುಟುಂಬದಲ್ಲಿ ಹೆಣ್ಣುಮಗುವು ಒಂದು ರೀತಿ

ಬೆಳೆದರೆ ಗಂಡು ಮಗುವು ಮತ್ತೊಂದು ರೀತಿಯಲ್ಲಿ ಬೆಳೆಯುತ್ತಾನೆ. ಈ ರೀತಿಯಾಗಿ ಭಿನ್ನ ರೀತಿಯಲ್ಲಿ ಬೆಳೆಯುವುದು ಕುಟುಂಬದ ಸಾಮಾಜೀಕರಣದಲ್ಲಿ ಒಳಗೊಂಡಿದೆ. ಕುಟುಂಬದಲ್ಲಿ ಹುಡುಗಿಗೆ ನಯ, ನಾಜುಕುತನ, ವಿನಯ, ನಮ್ರತೆಯ, ತಗ್ಗಿಬಗ್ಗಿ ನಡೆಯುವ ತರಬೇತಿಯನ್ನು ನೀಡಿದರೆ, ಹುಡುಗನಿಗೆ ಒರಟುತನ, ಸಿಡುಕುತನ ಚಿಕ್ಕವರಿರುವಾಗಲೇ ರೂಢಿಸಿಬಿಡಲಾಗಿದೆ. ಅಲ್ಲದೆ ಹೆಣ್ಣು ಮಗುವು ಕುಟುಂಬದಲ್ಲಿ ಹೆಚ್ಚು ಮಾತನಾಡಬಾರದು, ಅಪಹಾಸ್ಯವಾಗಿ ನಗಬಾರದು ಎಂದು ಚಿಕ್ಕವರಿರುವಾಗಲೇ ಹೇಳಿ ಕೊಡುತ್ತಾರೆ. ಆದುದರಿಂದಲೇ ತಾಯಿಯನ್ನು ಹೆಣ್ಣು ಮಗು ಅನುಸರಿಸುತ್ತದೆ. ತಾಯಿಯು ಅಡುಗೆ ಪಾತ್ರದಲ್ಲಿ ಸಿದ್ಧಗೊಂಡರೆ ಹೆಣ್ಣು ಮಗುವು ತಾನು ಅಡುಗೆ ಮಾಡಬೇಕು ತನ್ನ ಕೆಲಸ ಅಡುಗೆ ಮಾಡುವುದು ಎಂದು ತಿಳಿಯುತ್ತದೆ. ಆದುದರಿಂದಲೇ ಚಿಕ್ಕವಯಸ್ಸಿನಲ್ಲಿಯೇ ಹೆಣ್ಣು ಮಗುವಿಗೆ ಆಟದ ಸಾಮಾನುಗಳಲ್ಲೂ ಸಹ ಭೇದಭಾವ ಮಾಡಿ ಹುಡುಗಿಗೆ ಅಡುಗೆ ಮಾಡುವ ಆಟದ ಸಾಮಾನುಗಳನ್ನು ತಂದುಕೊಡುವರು. ಆದರೆ ಹುಡುಗನಿಗೆ ಬ್ಯಾಟು, ಕಾರು, ಚಂಡು ಕೊಡಿಸುವರು. ಅಂದರೆ ಹುಡುಗನು ಆಟದಲ್ಲಿಯೂ ಸಹ ಸ್ವತಂತ್ರ ಜೀವಿಯಾದರೆ, ಹುಡುಗಿಯಾದವಳು ಆಟದ ಮೂಲಕ ಅಡಿಗೆ ಮಾಡುವುದು ಪತಿಗೆ ವಿಧೇಯಳಾಗುವುದು, ಗಂಡನ ಎಲ್ಲಾ ಕೆಲಸಗಳನ್ನು ಮಾಡುವುದು ಇವೆಲ್ಲವು ಕುಟುಂಬದಲ್ಲಿ ದಿನನಿತ್ಯ ಆಗುವ ಘಟನೆಗಳನ್ನು ಹೆಣ್ಣು ಮಗು ಮತ್ತು ಗಂಡು ಮಗು ಆಟದ ಮೂಲಕ ಕಲಿಯುತ್ತಾರೆ. ಅಂದರೆ ಮದುವೆಯಾದ ಮೇಲೆ ಕುಟುಂಬದಲ್ಲಿ ಹೇಗೆ ಇರಬೇಕೆನ್ನುವುದನ್ನು ಮತ್ತು ಪತಿಯನ್ನು ಓಲಿಸಿಕೊಳ್ಳಲು ಹೇಗೆ ಶೃಂಗರಿಸಿಕೊಳ್ಳಬೇಕು ಎನ್ನುವುದನ್ನು ಸಹ ಮಗುವಿರುವಾಗಲೇ ಕುಟುಂಬದಲ್ಲಿ ತನ್ನ ತಾಯಿಯ ಮೂಲಕ ಕಲಿಯುತ್ತಾಳೆ.

ಕುಟುಂಬದಲ್ಲಿ ಮಕ್ಕಳ ನಡುವೆ ಬೇಧಗಳು ಕಾಣುತ್ತೇವೆ. ಹುಡುಗನು ಸ್ವತಂತ್ರವಾಗಿರುವನು. ಆದರೆ ಹುಡುಗಿಯಾದವಳು ಸದಾ ಕೆಲಸ ಕಾರ್ಯಗಳಲ್ಲಿ ನಿರತಳಾಗಿರುತ್ತಾಳೆ. ತಂದೆ-ತಾಯಿಗಳು ಮಗನನ್ನು ಕೆಲಸಕ್ಕೆ ಹೇಳುವುದಿಲ್ಲ. ಮಗಳನ್ನು ಸ್ವತಂತ್ರವಾಗಿ ಇರಲು ಪ್ರೇರೇಪಿಸುವುದಿಲ್ಲ. ಆದುದರಿಂದಲೇ ಹೆಣ್ಣುಮಗು ಪಾತ್ರೆತೊಳೆಯುವುದು, ಮನೆಯಲ್ಲಿ ಇರುವುದು, ತನ್ನ ಕರ್ತವ್ಯ ಎಂದು ತಿಳಿದುಕೊಳ್ಳುವಳು. ಯಾಕೆಂದರೆ ತಂದೆ ತಾಯಿಯ ಮೂಲ ಪ್ರೇರಣೆ ಪಾತ್ರಕ್ಕನುಗುಣವಾಗಿ ಇರುವಾಗ ತಾರತಮ್ಯಗಳು ಸಹಜವಾಗಿ ಕುಟುಂಬದಲ್ಲಿ ತರಬೇತಿಗಳನ್ನು ಪಡೆದುಕೊಳ್ಳುವರು. ಅನೇಕ ರೀತಿಯ ವ್ಯವಸ್ಥೆಗಳು ಗಂಡುಮಗುವಿಗೆ ಇರುವುದರಿಂದ ಅವನ ಹುಟ್ಟನ್ನು ಸ್ವಾಗತೀಸುತ್ತಾರೆ. ಹೆಣ್ಣು ಮಗು ವಂಶವೃದ್ಧಾಪಕಳಲ್ಲ, ತಂದೆ-ತಾಯಿಯನ್ನು ಪೋಷಿಸುವ ಹಾಗಿಲ್ಲ, ಅಧಿಕಾರದ ಸ್ಥಾನಮಾನಗಳಲ್ಲಿ ವರದಕ್ಷಿಣೆ ಭಾರ ಹೆಚ್ಚಾಗುವುದು. ಹೆಣ್ಣು ಮಗು ಶಕ್ತಿಯ ಪ್ರತೀಕಳಲ್ಲ, ಸಮಸ್ಯೆಗಳ ಪ್ರತೀಕವಾಗಿ ಗೋಚರಿಸುವುದರಿಂದ ಹೆಣ್ಣು ಮಗುವಿನ ಹುಟ್ಟುನ್ನು ಸಹ ಸಂತೋಷವಾಗಿ ಸ್ವೀಕರಿಸುವುದಿಲ್ಲ.

ಅನೇಕ ಕುಟುಂಬಗಳಲ್ಲಿ ಇಂದಿಗೂ ಸಹ ಹೆಣ್ಣು ಮತ್ತು ಗಂಡು ಮಕ್ಕಳಿಗೆ ಭಿನ್ನವಾದ ರೀತಿಯಲ್ಲಿ ಜೀವನವನ್ನು ನಡೆಸಲು ತರಬೇತಿಯನ್ನು ನೀಡಲಾಗುತ್ತದೆ. ಮಕ್ಕಳನ್ನು ಬೆಳೆಸುವಾಗ ಮತ್ತು ಸ್ತ್ರೀ ಪುರುಷರಲ್ಲಿ ಪಾತ್ರಗಳನ್ನು ಹಂಚುವಾಗ ಆ ಕುಟುಂಬದಲ್ಲಿ ಸ್ತ್ರೀ-ಪುರುಷರ ಜವಾಬ್ದಾರಿಗಳನ್ನು ಕುರಿತು ಆ ಕುಟುಂಬದ ಒಳ್ಳೆ ಪ್ರವೃತ್ತಿಗಳು(ಪರಂಪರೆ) ಪ್ರಮುಖ ಪಾತ್ರವಹಿಸುತ್ತವೆ. ಆದುದರಿಂದ ಕುಟುಂಬದಲ್ಲಿಯ ಹೆಣ್ಣು ಮಗು ಮತ್ತು ಗಂಡುಮಗುವೆಂದು ತಾರತಮ್ಯ ಸೃಷ್ಟಿಯಾಗುತ್ತದೆ. ಗಂಡು ಸಂತಾನವನ್ನು ಕುರಿತು ಪ್ರೀತಿ, ಒಲವುಗಳನ್ನು ಮಗು ಹುಟ್ಟುವ ಮೊದಲೇ ಕುಟುಂಬದಲ್ಲಿ ಕಾಣುತ್ತೇವೆ. ಲಿಂಗ ಆಧಾರೀತ ಸಾಮಾಜೀಕರಣದ ಪ್ರಕ್ರಿಯೆಯೂ ಶಿಶು ಬೆಳೆದು ದೊಡ್ಡದಾಗಿ ಮುಪ್ಪು ತಲುಪುವವರೆಗೂ ಜೀವನದ ಅನೇಕ ಹಂತಗಳಲ್ಲಿ ಸಾಮಜೀಕರಣದ ಪರಿಣಾಮಗಳನ್ನು ಹೆಣ್ಣು ಮಕ್ಕಳು ಎದುರಿಸುತ್ತಿದ್ದಾರೆ. ಅಲ್ಲದೆ ಹೆಣ್ಣು ಮತ್ತು ಗಂಡು ಮಕ್ಕಳನ್ನು ಭಿನ್ನವಾದ ರೀತಿಯಲ್ಲಿ ಜೀವನವನ್ನು ಎದುರಿಸಲು ಸಿದ್ಧಗೊಳಿಸುವುದು, ಹೆಣ್ಣುಮಕ್ಕಳಿಗೆ ಮತ್ತು ಗಂಡುಮಕ್ಕಳಿಗೆ ಬೇರೆ, ಬೇರೆ ಜವಾಬ್ದಾರಿಗಳನ್ನು ಹಂಚುವುದು ಸಾಮಾಜೀಕರಣದ ಮಾಲಕ. ಕುಟುಂಬದಲ್ಲಿಯೇ ಗಂಡು ಶ್ರೇಷ್ಠ, ಹೆಣ್ಣು ಕನಿಷ್ಠ ಎನ್ನುವ ಭಾವನೆಗಳನ್ನು ಸ್ತ್ರೀ ಪುರುಷರ ಮನದಲ್ಲಿ ಕುಟುಂಬವು ಲಿಂಗಾಧಾರಿತ ಸಾಮಾಜೀಕರಣ, ಆ ಕುಟುಂಬದ ಸದಸ್ಯರನ್ನು ಲಿಂಗ ಅಸಮಾನತೆಯ ತತ್ವಗಳನ್ನು ಆಧರಿಸಿದ ಬದುಕಿಗೆ ಸಿದ್ಧಗೊಳಿಸುವಂತೆ ಮಾಡುತ್ತದೆ. ಕುಟುಂಬದಲ್ಲಿ ಹೆಣ್ಣು ಮಗು ಹುಟ್ಟಿದರೆ ಮಗುವಿನ ತಾಯಿಯನ್ನು ದ್ವೇಷಿಸುವುದು ಕೆಲವೊಂದುಬಾರಿ ಆಕೆಗೆ ಹೆಣ್ಣು ಮಗು ಆಗಿದೆ ಎಂದು ಗಂಡು ಸಂತಾನ ಪಡೆಯುವ ಆಸೆಯಿಂದ ಗಂಡನಿಗೆ ಮತ್ತೊಂದು ಮದುವೆಯನ್ನು ಮಾಡಿಸುವುದು ಅನೇಕ ಕುಟುಂಬಗಳಲ್ಲಿ ಕಂಡುಬರುತ್ತದೆ.

"ಹೆಣ್ಣುಹುಟ್ಟುವ ಮೊದಲೇ ಅಥವಾ ಹುಟ್ಟಿದ ತಕ್ಷಣವೇ ಕೊಲ್ಲುವವರು ಹಲವರಾದರೆ, ಬದುಕುಳಿದ ಹೆಣ್ಣುಮಕ್ಕಳನ್ನು ಎಲ್ಲಾ ಬಗೆಯ ತಾರತಮ್ಯಗಳಿಗೆ ಒಳಪಡಿಸುವವರು ಅನೇಕರು, ಹೆಣ್ಣುಮಕ್ಕಳು ತಗ್ಗಿ-ಬಗ್ಗಿ ನಡೆಯಬೇಕು. ಅವರಿಗೆ ಸದಾಕಾಲವೂ ಯಾರಾದರೊಬ್ಬರ ಜೊತೆಯ ಅವಶ್ಯಕತೆಯಿದೆ. ಅವರು ಪ್ರಶ್ನೆಗಳನ್ನು ಕೇಳಬಾರದು. ತಂದೆ ತಾಯಿಯರ ಮಾತಿನಂತೆಯೇ ನುಡಿಯಬೇಕು, ನಡೆಯಬೇಕು ಅಣ್ಣ ತಮ್ಮಂದಿರು ಗಂಡು ಮಕ್ಕಳಾದ ಕಾರಣ ಅವರ ಬೇಕುಬೇಡಗಳಿಗೆ ಮೊದಲೇ ಆದ್ಯತೆ ನೀಡಬೇಕು. ತಮ್ಮ ಆಸೆ ಆಕಾಂಕ್ಷೆಗಳನ್ನು ಒತ್ತೆಯಿಟ್ಟು ಕುಟುಂಬದ ಇತರರಿಗಾಗಿ ದುಡಿಯಬೇಕು. ತಮ್ಮ ಬದುಕಿನ ಬಗ್ಗೆ ನಿರ್ಧಾರಗಳನ್ನು ತೆಗೆದುಕೊಳ್ಳಲು ಹೆಣ್ಣು ಮಕ್ಕಳಿಗೆ ಸ್ವತಂತ್ರವಿಲ್ಲ. ಇವೇ ಮುಂತಾದ ಪ್ರವೃತ್ತಿಗಳನ್ನು ಬಿತ್ತಿ, ಬೆಳೆಸುವುದು ಕುಟುಂಬ ಎನ್ನುವುದರಲ್ಲಿ ಸಂದೇಹವಿಲ್ಲ."[೩] ಒಟ್ಟಿನಲ್ಲಿ ಅನೇಕ ಕುಟುಂಬಗಳಲ್ಲಿ ಗಂಡು ಹೆಣ್ಣು ಮಕ್ಕಳಿಗೆ ಸಮಾನಾಗಿ ಕಾಣದೆ ಹೆಣ್ಣು ಕೀಳು ಗಂಡು ಮೇಲು ಎನ್ನುವ ಭಾವನೆಯನ್ನು ಕುಟುಂಬದಲ್ಲಿ ಒಪ್ಪಿಕೊಳ್ಳುವಂತೆ ಮಾಡಲಾಗಿದೆ.

ಕುಟುಂಬ ವ್ಯವಸ್ಥೆಯಲ್ಲಿ ಮೊದಲು ಕುಟುಂಬದ ಸದಸ್ಯರಿಗೆ ತಾವು ನಿರ್ವಹಿಸಬೇಕಾದ ಜವಾಬ್ದಾರಿಗಳನ್ನು ಕುರಿತು ಅರಿವನ್ನು ಮೂಡಿಸುತ್ತದೆ. ಕುಟುಂಬದ ಉದ್ಯೋಗ ಯಾವುದೇ ಇರಲಿ ಮಕ್ಕಳ ಲಾಲನೆ-ಪಾಲನೆ, ಅಡುಗೆ ಮಾಡುವುದು ಹಾಗೂ ಊಣಬಡಿಸುವುದು ಇವೆಲ್ಲವು ಮಹಿಳೆಯರು ಮಾಡುವಂತಹ ಕೆಲಸಗಳಾಗಿವೆ. ಅಲ್ಲದೆ ಕೃಷಿ ಕುಟುಂಬಗಳಲ್ಲಿ ಮಹಿಳೆಯಾದವಳು ಇವೆಲ್ಲ ಕೆಲಸಗಳನ್ನು ನಿರ್ವಹಿಸುವವರ ಜೊತೆಗೆ ಹೊಲದಲ್ಲಿಯೂ ದುಡಿಯುತ್ತಾಳೆ. ಈ ಕೃಷಿಕ್ಷೇತ್ರಗಳಲ್ಲಿಯೂ ಸಹ ಮಹಿಳೆಯ ಕೆಲಸಗಳು ಮತ್ತು ಪುರುಷರ ಕೆಲಸಗಳನ್ನು ಗುರುತಿಸಲಾಗಿದೆ. ಪುರುಷನು ಯಾವಾಗಲು ಉತ್ಪಾದಕನಾಗಿ, ಕುಟುಂಬದ ನಿರ್ವಹಣೆಗಾಗಿ ದುಡಿಯುವನು. ಅವನ ಗಳಿಕೆಯಿಂದಲೇ ಜೀವನ ನಡೆಯುವುದು ಎಂದು ಜಗತ್ತಿನ ಎಲ್ಲ ಕಡೆಗೂ ಈ ಕಲ್ಪನೆ ತುಂಬಿಕೊಂಡಿದೆ.

ಹೆಣ್ಣು ಮಗು ಆದವಳು ಯಾವಾಗಲು ತಾಯಿಯಾದವಳ ಕರ್ತವ್ಯಗಳನ್ನು ಅನುಸರಿಸಬೇಕು ಎನ್ನುವ ಒಂದು ರೀತಿಯ ಸಂಪ್ರದಾಯವೆ ಆಗಿದೆ. ತಾಯಿಯಾದವಳು ಕುಟುಂಬದಲ್ಲಿ ನಿರ್ವಹಿಸುವ ಜವಾಬ್ದಾರಿಗಳನ್ನೇ ಮಗಳಾದವಳು ವಹಿಸಿಕೊಳ್ಳಬೇಕಾಗುತ್ತದೆ. ಅದಕ್ಕಾಗಿಯೇ ಹೆಣ್ಣು ಮಕ್ಕಳನ್ನು ಮನೆಕೆಲಸಗಳಲ್ಲಿ ತೊಡಗಿಸುವುದು, ಅಡಿಗೆ ಕಲಿಸುವುದು, ಮಕ್ಕಳ ಲಾಲನೆ-ಪಾಲನೆ ಮಾಡುವುದು, ಈ ರೀತಿ ಮಾಡುವುದರಿಂದ ಅವರು ಸ್ವಾತಂತ್ರವಾಗಿ ಜೀವನ ನಿರ್ವಹಿಸಲು ಆಗುವುದಿಲ್ಲ. ಆದರೆ ಗಂಡು ಮಕ್ಕಳನ್ನು ಬೆಳೆಸುವಾಗ ಅತಿ ಚಿಕ್ಕವಯಸ್ಸಿನಲ್ಲಿಯೇ ಸ್ವತಂತ್ರ ವ್ಯಕ್ತಿಯಂತೆ ನಡೆಸಿಕೊಳ್ಳುವರು ಮತ್ತು ಅವರಿಗೆ ಮನೆಯ ಹೊರಗಿನ ಕೆಲಸಗಳನ್ನು ಹಚ್ಚುವುದರಿಂದ ಅವರಿಗೆ ಧೈರ್ಯ ಇರುವುದು, ಗಂಡು ಮಗು ಕಸಗುಡಿಸಬಾರದು, ಪಾತ್ರೆತೊಳೆಯ ಬಾರದು, ಅವರು ಈ ಕೆಲಸವನ್ನು ಮಾಡಿದರೆ ಅಪಶಕುನ ಎಂದು ಇವೆಲ್ಲವು ಪಿತೃಪ್ರಧಾನ ಮೌಲ್ಯಗಳೆ ಆಗಿವೆ.

ಮಹಿಳೆಯು ಉದ್ಯೋಗಸ್ಥೆಯಾಗಿದ್ದರೆ, ಅವಳು ಮನೆಯ ಎಲ್ಲಾ ಕೆಲಸಗಳನ್ನು ಮಾಡಿಕೊಂಡು ಉದ್ಯೋಗವನ್ನು ಮಾಡಬೇಕು. ಮನೆಯಲ್ಲಿ ಯಾರಾದರೂ ಕಾಯಿಲೇ ಬಿದ್ದಿದ್ದರೆ ಇವೆರಡು ಕೆಲಸ ನಿರ್ವಹಿಸುವುದರ ಜೊತೆಗೆ ಅವರ ಸೇವೆಯನ್ನು ಸಹ ಮಾಡಬೇಕಾಗಿದೆ. ಮನೆಯಲ್ಲಿ ತನ್ನ ಮಗುವಿನ ಆರೋಗ್ಯ ತಪ್ಪಿದರೆ, ಆ ಮಗುವಿನ ತಾಯಿಯಾದವಳು ಮನೆಯಲ್ಲಿಯೇ ಇದ್ದುಕೊಂಡು ಆ ಮಗುವನ್ನು ನೋಡಿಕೊಳ್ಳಬೇಕು. ಅದೇ ತಂದೆಯಾದವನು ಆ ಮಗುವನ್ನು ನೋಡಿಕೊಳ್ಳುವುದಿಲ್ಲ. ಅದಕ್ಕೆ ಸಮಾಜ ಯಾವುದೇ ರೀತಿಯ ನಿಂದನೆಗೆ ಗುರಿಮಾಡುವುದಿಲ್ಲ. ಆದರೆ ಸ್ತ್ರೀಯಾದವಳು ಈ ಯಾವುದಾದರು ಕೆಲಸ ನಿರ್ವಹಿಸುವಲ್ಲಿ ಕೊಂಚ ತಡವಾದರು ಸಹ ಸಮಾಜ ಅವಳನ್ನು ದುಷಿಸಲು ಪ್ರಾರಂಭಿಸುವರು. ತನ್ನ ಜೀವನದುದ್ದಕ್ಕೂ ಕುಟುಂಬಕ್ಕಾಗಿ ದುಡಿಯುತ್ತ ಬಂದಿರುವ ಮಹಿಳೆ ತನ್ನ ಬದುಕನ್ನು ರೂಪಿಸಲು ಹೊರಟಾಗ ತಾನು ಮಾಡಬಾರದ ತಪ್ಪನ್ನು ಮಾಡುತ್ತಿದ್ದೇನೆ ಎಂಬ ತಪ್ಪಿತಸ್ಥ ಭಾವನೆಯನ್ನು ಅವಳಲ್ಲಿ

ಮೂಡಿಸಿ ತನ್ನ ಜೀವನದ ಏಕೈಕ ಗುರಿ ಪತಿ ಮತ್ತು ಮಕ್ಕಳ ಸೇವೆ ಹಾಗು ಕುಟುಂಬದ ನಿರ್ವಹಣೆ ಎಂದು ಅವಳು ಸ್ವತ ಒಪ್ಪಿಕೊಳ್ಳುವಂತಹ ಪರಿಸ್ಥಿತಿಯು ಕುಟುಂಬ ತಂದಿಡುತ್ತದೆ.

ಹೆಣ್ಣನ್ನು ತ್ಯಾಗಮಯಿ ಎನ್ನುವ ಮೂಲಕ ನಮ್ಮ ಸಂಸ್ಕೃತಿಯು ಅವಳಿಗೆ ಸಹಜವಾಗಿ ಬೇಕಾಗುವ ಅವಶ್ಯಕತೆಗಳನ್ನು ಕೂಡ ಪೂರೈಸಿಕೊಳ್ಳಲಾಗದಂಥ ಪರಿಸ್ಥಿತಿಯನ್ನು ಸೃಷ್ಟಿಸಿವೆ. ತಾನು ಹಸಿವೆಯಿಂದ ನರಳಿದರು ಚಿಂತೆಯಿಲ್ಲ ತನ್ನ ಗಂಡ ಮಕ್ಕಳು ತೃಪ್ತಿಯಿಂದ ತಿನ್ನಬೇಕೆನ್ನುವ ಭಾವನೆ ಅನೇಕ ಮಹಿಳೆಯರಲ್ಲಿ ಮೂಡುವಂತೆ ಮಾಡಿದೆ. ಆದರೆ ಅವಳು ಹೆಣ್ಣು ಎನ್ನುವ ಕಾರಣಕ್ಕಾಗಿ ಅವಳು ಅನೇಕ ರೀತಿಯ ಅನುಕೂಲಗಳಿಂದ ವಂಚಿತಳಾಗಿದ್ದಾಳೆ. ಹೆಜ್ಜೆ-ಹೆಜ್ಜೆಗೂ(ಕ್ಷಣ-ಕ್ಷಣಕ್ಕೂ) ನೀನು ಹೆಣ್ಣು. ಈ ಮನೆಯಿಂದ ಬೇರೆ ಮನೆಗೆ ಸೇರುವವಳು ಎನ್ನುವ ಚುಚ್ಚುಮಾತುಗಳಿಂದ ಹೆಣ್ಣಿನ ಮನಸ್ಸನ್ನು ನೋಯಿಸಿ ಅವಳಿಗೆ ತನ್ನ ಬಗ್ಗೆಯೇ ಕೀಳರಿಮೆಯ ಭಾವನೆಯನ್ನು ಮೂಡುವಂತೆ ಮಾಡಿದೆ. ಈ ರೀತಿಯ ಲಿಂಗ ತಾರತಮ್ಯವು ನಮ್ಮ ಕುಟುಂಬಗಳಲ್ಲಿ ಕಂಡುಬರುತ್ತದೆ.

ಶಿಕ್ಷಣವು ಮಾನವನ ಬದುಕನ್ನು ಅರ್ಥಪೂರ್ಣವಾಗಿ ಮಾಡುವುದರ ಜೊತೆಗೆ ಸಂಸ್ಕೃತಿಯನ್ನು ತಲೆಮಾರಿನಿಂದ ತಲೆಮಾರಿಗೆ ವರ್ಗಾಯಿಸುವಂಥ ಮತ್ತು ಬದಲಾವಣೆಯನ್ನು ತರುವಂತಹ ಒಂದು ಸಾಮಾಜಿಕ ಸಂಸ್ಥೆಯಾಗಿದೆ. ಶಿಶು ಜೈವಿಕ ಜೀವಿಯ ಹಂತದಿಂದ ಸಾಮಾಜಿಕ ಜೀವಿಯ ಪರಿಸ್ಥಿತಿಯನ್ನು ತಲುಪುವುದು ಶಿಕ್ಷಣದಿಂದಲೆ. "ಸಾಮಾನ್ಯವಾಗಿ ಆಹಾರ, ಅರಿವೆ, ಆಸರೆ ಈ ಮೂರನ್ನು ಮಾತ್ರ ಮಾನವನ ಮೂಲಭೂತ ಅವಶ್ಯಕತೆಗಳೆಂದು ಗುರುತಿಸಲಾಗುತ್ತದೆಯಾದರೂ ಅರಿವು ಕೂಡ ಮಾನವ ಜೀವನಕ್ಕೆ ಅಷ್ಟೇ ಅವಶ್ಯಕವಾದಂಥ ಒಂದು ಸಾಧನ. ಮಾನವನನ್ನು ಪ್ರಾಣಿಸ್ಥಿತಿಯಿಂದ ಮೇಲೆತ್ತುವುದೇ ಜ್ಞಾನಾರ್ಜನೆ. ತನ್ನ ಸುತ್ತಮುತ್ತಣ ಪ್ರಪಂಚದ ಬಗ್ಗೆ ಮಾನವ ಶಿಶು ಅರಿವನ್ನು ಪಡೆಯುವ ಪ್ರಕ್ರಿಯೆಯನ್ನು ಸಾಮಾಜೀಕರಣ ಎಂದು ಹೇಳುತ್ತಾರೆ. ಶಿಕ್ಷಣ ಈ ಸಾಮಾಜೀಕರಣದ ಪ್ರಮುಖ ಸಾಧನಗಳಲ್ಲಿ ಒಂದು. ಶಿಕ್ಷಣದ ಸ್ವರೂಪ ಔಪಚಾರಿಕವೇ ಆಗಲಿ, ಅನೌಪಚಾರಿಕವೇ ಆಗಲಿ, ಆ ಶಿಕ್ಷಣ ಎಂಬ ಪ್ರಕ್ರಿಯೆಗೆ ಒಳಪಟ್ಟ ವ್ಯಕ್ತಿಗಳೆಲ್ಲಾ ವಿಷಯ ಸಂಗ್ರಹಣೆಯೇ ಅಲ್ಲದೆ ಆಯಾ ಸಮಾಜದಲ್ಲಿ ಜಾರಿಯಲ್ಲಿರುವಂತಹ ಸಂಸ್ಕೃತಿ ಮೌಲ್ಯಗಳ ಬಗ್ಗೆಯೂ ತಿಳುವಳಿಕೆಯನ್ನು ಪಡೆಯುತ್ತಾರೆ. ಕಲಿಕೆಯ ಪ್ರಕ್ರಿಯೆಯಲ್ಲಿಯೇ ಜೀವನವನ್ನು ಕುರಿತು ದೃಷ್ಟಿಕೋನಗಳನ್ನು ವ್ಯಕ್ತಿಗಳು ಬೆಳೆಸಿಕೊಳ್ಳುತ್ತಾರೆ. ತಮ್ಮ ತಮ್ಮ ಸಾಮಾಜಿಕ ಪರಿಸರವನ್ನು ಕುರಿತಂತೆ ಅರಿವನ್ನು ಮೂಡಿಸಿಕೊಳ್ಳಲು ವಯಸ್ಕರು ಮತ್ತು ಮಕ್ಕಳಾದಿಯಾಗಿ ಎಲ್ಲರೂ ಶಿಕ್ಷಣವನ್ನೇ ಅವಲಂಬಿಸಿರುವುದರಿಂದ ಮಾನವ ಸಾಮಾಜೀಕರಣದಲ್ಲಿ ಶಿಕ್ಷಣದ ಪಾತ್ರ ಮಹತ್ವವಾದುದು."[೪]

ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಮಗುವಿಗೆ ಪರಿಸರವನ್ನು ಪರಿಚಯಿಸುತ್ತದೆ. ಶಾಲೆಯಲ್ಲಿ ಮಗುವು ವಿಭಿನ್ನ ಆಸೆ ಆಕಾಂಕ್ಷೆಗಳು, ವಿಭಿನ್ನ ಚತುರತೆ, ಕುಶಲತೆ, ಸಂಸ್ಕೃತಿ ಮತ್ತು ಅಂತಸ್ತನ್ನು ಹೊಂದಿರುವ ಉಪಾಧ್ಯಾಯರು ಮತ್ತು ಸಹಪಾಠಿಗಳ ಸಂಪರ್ಕವನ್ನು ಹೊಂದುತ್ತಾರೆ. ಶಾಲೆಯಲ್ಲಿ ವಿಭಿನ್ನ ರೀತಿಯ ಬಡವ-ಬಲ್ಲಿದ, ಸ್ಫುರದ್ರೂಪಿ-ಕುರೂಪಿ, ಸೌಮ್ಯ-ಒರಟು ವಿದ್ಯಾರ್ಥಿಗಳೊಡನೆ ಬೆರೆಯುತ್ತಾರೆ. ಹೊಸ ಸನ್ನಿವೇಶಗಳು ಮತ್ತು ಪರಿಸರಗಳಿಗೆ ಹೊಂದಿಕೊಳ್ಳುತ್ತಾರೆ. ಉಪಾಧ್ಯಾಯರ ಮಾರ್ಗದರ್ಶನ ನಿಯಂತ್ರಣ ಮತ್ತು ಪ್ರೀತಿವಾತ್ಸಲ್ಯಕ್ಕೆ ಒಳಗಾಗುತ್ತಾರೆ. ವಿದ್ಯಾರ್ಥಿಗಳು ಶಿಸ್ತು, ಕ್ರಮಬದ್ಧತೆ, ಸಮಯ ಪಾಲನೆ, ಶ್ರದ್ಧೆ, ಕರ್ತವ್ಯ ಪ್ರಜ್ಞೆಗಳನ್ನು ಮೈಗೂಡಿಸಿಕೊಳ್ಳುತ್ತಾನೆ. ಇದು ವ್ಯಕ್ತಿಯಲ್ಲಿ ವಿಶಾಲ ಮನೋಧರ್ಮವನ್ನು ಮತ್ತು ದೃಷ್ಟಿಕೋನವನ್ನು ಬೆಳೆಸುತ್ತದೆ. ಅನೌಪಚಾರಿಕ ಶಿಕ್ಷಣದಿಂದ ಮಗುವು ನಡವಳಿಕೆಯನ್ನು ನೀತಿ, ಶೌರ್ಯ, ಸಾಹಸಗಳನ್ನು ಮೈಗೂಡಿಸಿಕೊಳ್ಳುತ್ತದೆ. ಮಗುವಿನ ವ್ಯಕ್ತಿತ್ವಗಳು ಸಾಹಿತ್ಯಕಥೆಗಳು, ಲೇಖನಗಳು ಮತ್ತು ಪ್ರಬಂಧಗಳಿಂದ ಪ್ರಭಾವಿತಗೊಂಡು ವಿಕಾಸಗೊಳ್ಳುತ್ತಾರೆ.

ಶಿಕ್ಷಣವನ್ನು ಪಡೆಯುವಲ್ಲಿಯೂ ಸಹ ಮಹಿಳೆ ಮತ್ತು ಪುರುಷ ಎನ್ನುವ ತಾರತಮ್ಯವನ್ನು ಮಾಡುವರು. ಉದಾ : ಗಂಡುಮಗುವಾದರೆ ವಂಶೋದ್ಧಾರಕ, ಮುಂದೆ ನಮ್ಮನ್ನು ಸಾಕುವನು ಎನ್ನುವ ದೃಷ್ಟಿಯಿಂದ ಆತನಿಗೆ ಉತ್ತಮವಾದ ಉನ್ನತವಾದ ಶಿಕ್ಷಣವನ್ನು ಕೊಡಿಸುವಲ್ಲಿ ಹಿಂಜರಿಯುವುದಿಲ್ಲ. ಆದರೆ ಮಹಿಳೆಯು ಎಷ್ಟೇ ಕಲಿತರು ಇವಳು ಬೇರೆ ಮನೆಗೆ ಸೇರುವವಳು, ಅಲ್ಲದೆ ಇವಳು ಅಡಿಗೆ ಮನೆಗೆ ಸೀಮಿತಳು ಎನ್ನುವ ಕಾರಣದಿಂದ ಅವಳಿಗೆ ಶಿಕ್ಷಣ ನೀಡುವಲ್ಲಿ ಹಿಂಜರಿಯುವರು ಕುಟುಂಬದಲ್ಲಿ. ಕುಟುಂಬದಲ್ಲಿ ಶಿಕ್ಷಣ ಪಡೆಯಲು ತಾರತಮ್ಯ ಮಾಡಿದ ಹಾಗೆ ಶಾಲೆಯಲ್ಲಿಯೂ ಸಹ ಅವಳನ್ನು ತಾರತಮ್ಯಕ್ಕೆ ಗುರಿಮಾಡುವರು. ಪಠ್ಯಪುಸ್ತಕದಲ್ಲಿಯೂ ಸಹ ಓದುವಾಗ ಸ್ತ್ರೀಯು ಪುರುಷನಿಗೆ ಅಧೀನಳಾಗಿರಬೇಕು. ಸ್ತ್ರೀಯು ಸಮಾಜದ ಎರಡನೆ ದರ್ಜೆಯ ಪ್ರಜೆಯೆಂದು ಅವಳನ್ನು ಒಪ್ಪಿಕೊಳ್ಳುವಂತೆ ಮಾಡಿದೆ. ಅಲ್ಲದೆ ಶಾಲೆಯಲ್ಲಿ ಆಟವಾಡುವಾಗಲು ಸಹ ಪುರುಷರ ಆಟಗಳು ಮತ್ತು ಸ್ತ್ರೀಯರು ಆಡುವ ಆಟಗಳು ಬೇರೆ ಬೇರೆಯಾಗಿರುತ್ತವೆ. ಇದರರ್ಥ ನೀನು ಪುರುಷನಿಗೆ ಸರಿಸಮನಾಗಿ ನಿಲ್ಲಲ್ಲು ಸಾಧ್ಯವಿಲ್ಲ. ನಿನ್ನಲ್ಲಿ ಆ ಶಕ್ತಿ ಇಲ್ಲ. ನೀನು ಯಾವಾಗಲು ಪುರುಷನ ಅಧೀನದಲ್ಲಿಯೇ ಇರಬೇಕು ಎಂದು ತನ್ನನ್ನು ತಾನೇ ಒಪ್ಪಿಕೊಳ್ಳುವಂತೆ ಸಾಮಾಜೀಕರಣದ ಮೂಲಕ ಶಾಲೆಯಲ್ಲಿಯೂ ಸಹ ತಾರತಮ್ಯ ಮಾಡಲಾಗಿದೆ.

ಶಿಕ್ಷಣವು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಜ್ಞಾನ, ಸಂಸ್ಕೃತಿಯನ್ನು ವರ್ಗಾಯಿಸುವುದು. ಪ್ರತಿಯೊಂದು ಸಾಮಾಜಿಕ ವ್ಯವಸ್ಥೆಗೂ ತನ್ನದೇ ಆದಂಥಹ ಒಂದು ಸಂಸ್ಕೃತಿ ಇದ್ದೇ ಇರುತ್ತದೆ. ವ್ಯಕ್ತಿಯ ವ್ಯಕ್ತಿತ್ವ ನಿರ್ಮಾಣದಲ್ಲಿ ಶಿಕ್ಷಣವು ಪ್ರಮುಖ ಪಾತ್ರವಹಿಸುತ್ತದೆ. ಶಿಕ್ಷಣ ವ್ಯವಸ್ಥೆಯೂ ರೂಪುಗೊಳ್ಳುವುದೆ

ಸಮಾಜದಲ್ಲಿ ಆದುದರಿಂದಲೇ ಶಿಕ್ಷಣಕ್ಕೂ ಮತ್ತು ಸಮಾಜಕ್ಕೂ ಪರಸ್ಪರ ಸಂಬಂಧ ಇದೆ. ಶಿಕ್ಷಣವು ಕಾಲದಿಂದ ಕಾಲಕ್ಕೆ ಬದಲಾಗುತ್ತ ಹೋಗುತ್ತದೆ. ಶಿಕ್ಷಣಕ್ಕೂ ಮಹಿಳೆಯರನ್ನು ಕುರಿತ ಸಾಮಾಜಿಕ ನಿಲುವುಗಳಿಗೆ ಅತ್ಯಂತ ನಿಕಟವಾದಂಥಹ ಸಂಬಂಧವಿದೆ. ಸಮಾಜದಲ್ಲಿ ಸಂಪ್ರದಾಯಕ ರೂಢಿನಿಯಮಗಳು ಬೇರುಬಿಟ್ಟಿರುವುದರಿಂದ ಮಹಿಳೆಯರನ್ನು ಶಿಕ್ಷಣದಿಂದ ವಂಚಿತಳನ್ನಾಗಿ ಮಾಡಿದೆ. ಪುರುಷನಿಗೆ ಎಲ್ಲ ರೀತಿಯ ಶಿಕ್ಷಣವನ್ನು ಪಡೆಯುವಂತೆ ಮಾಡಿದೆ. ಮಹಿಳೆಯು ಒಂದು ವೇಳೆ ಶಿಕ್ಷಣವನ್ನು ಪಡೆದರೆ ಅವಳು ಸ್ವಾವಲಂಬಿಯಾಗಿ ಬದುಕಲು ಪ್ರಯತ್ನಿಸುವಳು. ಆದುದರಿಂದ ಅವಳನ್ನು ಶಿಕ್ಷಣದಿಂದ ವಂಚಿತಳನ್ನಾಗಿ ಮಾಡಿದರೆ ಅವಳು ಪತಿಯ ಅಧೀನದಲ್ಲಿರುವಳು. ವಿಧವೆಯಾದವಳು ಒಂದು ವೇಳೆ ಶಿಕ್ಷಣವನ್ನು ಪಡೆದಿದ್ದರೆ ಅವಳು ಸ್ವಾವಲಂಬಿಯಾಗಿ ಬದುಕುವಳು ಎಂದು ತಿಳಿದುಕುಟುಂಬವು ಅವಳನ್ನು ಶಿಕ್ಷಣ ಪಡೆಯದಂತೆ ವಂಚಿತಳನ್ನಾಗಿ ಮಾಡಿದೆ.

ಧರ್ಮವು ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಇದರ ಪಾತ್ರ ಮಹತ್ವದ್ದಾಗಿದೆ. ಧರ್ಮವು ಸದಾ ಸಾಮಾಜೀಕರಣದ ಕೊಂಡಿಯಾಗಿ ಕಾರ್ಯನಿರ್ವಹಿಸುತ್ತದೆ. ಧರ್ಮವು ಮನುಷ್ಯನಲ್ಲಿ ನಂಬಿಕೆ, ಉದಾತ್ತ ಗುಣಗಳು, ಸಾಮಾಜಿಕ ಮೌಲ್ಯಗಳು ಮತ್ತು ನೈತಿಕ ಆದರ್ಶಗಳನ್ನು ಮೂಡಿಸುತ್ತವೆ. ಅಲ್ಲದೆ ದೇವರ ಮೇಲಿನ ನಂಬಿಕೆ, ಅಪವಿತ್ರತೆ, ಪಾಪ-ಪುಣ್ಯ, ನರಕ-ಸ್ವರ್ಗಗಳ ಮೇಲಿನ ನಂಬಿಕೆ, ಮಾನವನು ಅನೀತಿ ಮತ್ತು ದುರ್ಮಾರ್ಗವನ್ನು ಹಿಡಿಯದಂತೆ ಪಾಪ ಕೃತ್ಯಗಳನ್ನು ಮಾಡದಂತೆ ನಿಯಂತ್ರಿಸುತ್ತದೆ. ದೇವರ ಮೇಲಿನ ಭಯ ಭಕ್ತಿಯಿಂದ ನಮ್ಮನ್ನು ಸನ್ಮಾರ್ಗದಲ್ಲಿ ನಡೆಸುತ್ತದೆ. ಹಬ್ಬ ಹರಿದಿನಗಳು, ಕ್ರಿಯಾವಿಧಿಗಳು, ಧಾರ್ಮಿಕ ಆಚರಣೆಗಳು ಮಾಡುವಂತೆ ಧರ್ಮವು ಪ್ರೇರೇಪಿಸುತ್ತದೆ.

ವ್ಯಕ್ತಿತ್ವದ ಸಮಗ್ರತೆಗೆ ಧರ್ಮವು ಉತ್ತಮ ಸ್ಥಾನವಾಗಿದೆ. ಅದು ಕೇವಲ ಸಮಾಜವನ್ನು ಮಾತ್ರ ಒಂದುಗೂಡಿಸುವುದಲ್ಲದೆ. ವ್ಯಕ್ತಿತ್ವದಲ್ಲೂ ಸಮಗ್ರತೆಯನ್ನುಂಟು ಮಾಡುತ್ತದೆ. ಧರ್ಮವು ಹೆಚ್ಚಾಗಿ ಪುರುಷ ಪ್ರಧಾನವಾಗಿದ್ದು ಪುರುಷನ ಚಿಂತನೆಯಲ್ಲಿಯೇ ಉಗಮವಾಗಿದೆ. ಪುರುಷರ ನಿಯಂತ್ರಣದಲ್ಲಿಯೆ ಬೆಳೆದುಬಂದಿರುವುದರಿಂದ ಸ್ತ್ರೀಯನ್ನು ಎರಡನೆಯ ದರ್ಜೆಯ ಪ್ರಜೆಯನ್ನಾಗಿಸಿದೆ. ಧರ್ಮದ ಹೆಸರಿನಲ್ಲಿ ಮಹಿಳೆಯ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗಿದೆ. ಸತಿ ಸಹಗಮನ, ಕೇಶಮುಂಡನ, ವಿಧವೆಯರು ಧಾರ್ಮಿಕ ಕಾರ್ಯದಲ್ಲಿ ಪಾಲ್ಗೊಳ್ಳದಂತೆ ಅವಳು ಅಪಶಕುನ ಎಂದು ಧರ್ಮದಿಂದಲೇ ಹುಟ್ಟಿದೆ. ಮಹಿಳೆಯು ಹುಟ್ಟಿನಿಂದ ಜೀವನದ ಅಂತ್ಯದವರೆಗೆ ಪುರುಷರ ಅಧೀನಳಾಗಿ ಇರಬೇಕಾಗುತ್ತದೆ. ಆಕೆಗೆ ಯಾವುದೇ ಸ್ವಾತಂತ್ರ್ಯವಿಲ್ಲವೆಂದು ಧರ್ಮದ ನಿಯಮದಡಿಯಲ್ಲಿಯೇ ಮಕ್ಕಳಿಗೆ ಕುಟುಂಬದಲ್ಲಿ ತರಬೇತಿಯನ್ನು ನೀಡಲಾಗಿದೆ. ತನ್ನ ಆಸೆ ಆಕಾಂಕ್ಷೆಗಳನ್ನು ಬದಿಗೊತ್ತಿ ಅವಳು ಪುರುಷ ಚಿಂತನೆಗೆ ಸಹಜವಾಗಿಯೇ ಒಪ್ಪಿಕೊಳ್ಳಬೇಕಾಗಿದೆ.

ವ್ಯಕ್ತಿಯನ್ನು ಸಾಮಾಜೀಕರಣಗೊಳಿಸುವಲ್ಲಿ ಸಂಸ್ಕೃತಿಯು ಪ್ರಧಾನ ಪಾತ್ರವಹಿಸುತ್ತದೆ ಮತ್ತು ಸಹಾಯಕವಾಗಿದೆ. ಸಾಮಾಜೀಕರಣವನ್ನು ಸಾಮಾಜಿಕ ಅಥವಾ ಸಾಂಸ್ಕೃತಿಕ ಕಲಿಯುವಿಕೆಯೆಂದು ಹೇಳುತ್ತಾರೆ. ವ್ಯಕ್ತಿಯು ಸಮಾಜದಲ್ಲಿ ನೀತಿಬದ್ಧವಾಗಿ ಹೇಗೆ ಜೀವಿಸುವುದೆಂಬುದನ್ನು ಕಲಿಸುತ್ತದೆ. "ಸಂಸ್ಕೃತಿಯು ವ್ಯಕ್ತಿತ್ವವನ್ನು ನೇರವಾಗಿ ರೂಪಿಸದೇ ಹೋದರು ಪರೋಕ್ಷವಾಗಿ ಅದು ಈಡೇರಲು ಸಹಾಯಮಾಡುತ್ತದೆ. ಇದು ವ್ಯಕ್ತಿಯ ಗುಣ ಮತ್ತು ನಡತೆಯನ್ನು ರೂಪಿಸುತ್ತದೆ. ಸಂಸ್ಕೃತಿಯು ವ್ಯಕ್ತಿಗೆ ಶಿಷ್ಟಚಾರ, ಸಭ್ಯತೆ, ಘನತೆ, ಸದ್ವರ್ತನೆ, ಸದಾಚಾರ ಮುಂತಾದ ಜೀವನ ಮೌಲ್ಯಗಳನ್ನು ದೊರಕಿಸುತ್ತದೆ. ವ್ಯಕ್ತಿಯು ಹೇಗೆ ಇತರರೊಡನೆ ಬೆರೆಯಬೇಕು, ವರ್ತಿಸಬೇಕು, ಮಾತನಾಡಬೇಕು, ಊಟಮಾಡಬೇಕು, ನಡೆಯಬೇಕು ಮತ್ತು ಹೇಗೆ ಬಾಳಬೇಕೆಂಬುದನ್ನು ಸಂಸ್ಕೃತಿಯೂ ಕಲಿಸಿಕೊಡುತ್ತವೆ. ಸಂಸ್ಕೃತಿಯು ಮಾನವನಲ್ಲಿ ವಿಶಾಲಭಾವನೆ, ಹೃದಯ ವೈಶಾಲ್ಯತೆ ಮತ್ತು ದೂರದೃಷ್ಟಿಯನ್ನು ಬೆಳೆಸುತ್ತದೆ. ಅಲ್ಲದೆ ತನ್ನ ಪಂಚೇಂದ್ರಿಯಗಳ ಮೇಲೆ ನಿಯಂತ್ರಣ ಹೊಂದುವಂತೆ ಮಾಡುತ್ತದೆ. ಸಂಸ್ಕೃತಿಯು ಸಾಮಾಜೀಕರಣದ ಮೂಲಕ ವ್ಯಕ್ತಿಯನ್ನು ವಿವೇಕಿಯನ್ನಾಗಿ, ಜವಾಬ್ದಾರಿಯುತನನ್ನಾಗಿ ಮತ್ತು ಶಿಸ್ತುಗಾರನನ್ನಾಗಿ ಮಾಡುತ್ತದೆ."[೫]

ಸಮಾಜದಲ್ಲಿ ಮಹಿಳೆಗೆ ಪ್ರತ್ಯೇಕವಾದ ಅಸ್ತಿತ್ವವಿಲ್ಲದ ಕಾರಣ ಅವಳು ತನ್ನನ್ನು ತಾನು ಗುರುತಿಸಿ ಕೊಳ್ಳುವುದೆ ತಾನು ಇಂಥವರ ಮಗಳು, ಇಂಥವರ ಹೆಂಡತಿ, ಇಂಥವರ ತಾಯಿಯೆಂದೇ ಗುರುತಿಸಿಕೊಳ್ಳ ಬೇಕಾಗಿದೆ. ಆದರೆ ಸಮಾಜದಲ್ಲಿ ಪುರುಷನು ಸ್ವತಂತ್ರವಾಗಿ ತನ್ನನ್ನು ತಾನು ಗುರುತಿಸಿಕೊಳ್ಳುತ್ತಾನೆ. ಆದರೆ ಮಹಿಳೆಗೆ ಸ್ವತಂತ್ರವಾಗಿ ತನ್ನನ್ನು ತಾನು ಗುರುತಿಸಿಕೊಳ್ಳುವುದು ತುಂಬಾ ಕಷ್ಟಕರವಾಗಿದೆ. ಒಂದು ವೇಳೆ ಮಹಿಳೆಯು ಉದ್ಯೋಗಸ್ಥೆಯಾಗಿದ್ದರೆ, ಉದ್ಯೋಗ ಗುರುತಿಸುವುದರ ಮೂಲಕ ತನ್ನನ್ನು ಸ್ವತಂತ್ರವಾಗಿ ಗುರುತಿಸಲು ಅನುಕೂಲವಾಗಿದೆ. ಆದರೆ ಗೃಹಿಣಿ ಆಗಿದ್ದರೆ ಇವರ ಮನೆಯವಳು ಅಥವಾ ಇಂಥವರ ಹೆಂಡತಿಯೆಂದು ಗುರುತಿಸಬೇಕಾಗಿದೆ. ಈ ಮೂರು ಪಾತ್ರಗಳು ಅಂದರೆ ಮಗಳು, ಹೆಂಡತಿ, ತಾಯಿಯ ಪಾತ್ರ ನಿರ್ವಹಿಸಲು ಮಹಿಳೆಗೆ ಚಿಕ್ಕಂದಿನಿಂದಲೇ ತರಬೇತಿಯನ್ನು ಕೊಡಲಾಗಿದೆ. ಮಗಳು ಆದವಳು ಯಾವ-ಯಾವ ರೀತಿ ವರ್ತಿಸಬೇಕು. ಯಾವ ರೀತಿ ನಡೆದುಕೊಳ್ಳಬೇಕು, ಯಾವ ರೀತಿ ಮಾತನಾಡಬೇಕು ಎಂದು ಸಾಮಾಜೀಕರಣದ ಮೂಲಕ ಕುಟುಂಬದಲ್ಲಿ ಅವಳಿಗೆ ಚಿಕ್ಕದಿನಿಂದಲೇ ತರಬೇತಿಯನ್ನು ನೀಡಲಾಗಿದೆ.

ಮಹಿಳೆಯಾದವಳು ಯಾರಿಗೆ ಅಧೀನಳಾಗಿರುತ್ತಾಳೆ ಆ ಗಂಡಸಿಗೆ ಸಹಕಾರಿಯಾಗಿ ಆತನಿಗೆ ಹೊಂದಿಕೊಂಡು ಇರಬೇಕಾಗಿದೆ. ಅಪ್ಪನ ಮನೆಯಲ್ಲಿ ಇರುವಾಗ ತಂದೆಗೆ ಹೊಂದಿಕೆಯಾಗುವ ಹಾಗೆ ಇರಬೇಕು ನಂತರ ಮದುವೆಯಾಗಿ ಗಂಡನ ಮನೆಗೆ ಹೋದರೆ ಗಂಡನಿಗೆ ಹೊಂದಿಕೆ ಆಗುವ ಹಾಗೆ ಇರಬೇಕು. ಮುಂದೆ ಮಕ್ಕಳಾದ ಮೇಲೆ ಮಕ್ಕಳ ಜೊತೆ ಇರಬೇಕಾದರೆ ಆ ಮಕ್ಕಳಿಗೂ ಸಹ ಹೊಂದಿಕೊಂಡು ಹೋಗಬೇಕಾಗಿದೆ.

ಈ ರೀತಿ ಮಹಿಳೆಯನ್ನು ಸಿದ್ಧಗೊಳಿಸಲಾಗುತ್ತದೆ. ಕುಟುಂಬದಲ್ಲಿ ಸಾಮಾಜೀಕರಣದ ಮೂಲಕ, ಅವಳು ಯಾವುದೇ ಪರಿಸ್ಥಿತಿಯಲ್ಲಿ ಸಾಮಾಜಿಕ ನಿಯಮಗಳನ್ನು ದಾಟಿ ಹೋಗಬಾರದು ಎನ್ನುವ ಪರಿಸ್ಥಿತಿಗೆ ತಂದಿಡಲಾಗಿದೆ. ಮಹಿಳೆಗೆ ಸಾಮಾಜಿಕ ನಿಯಮಗಳನ್ನು ತನ್ನಷ್ಟಕ್ಕೆ ತಾನೇ ಒಪ್ಪಿಕೊಂಡು ಅವಳು ಬದುಕಬೇಕಾಗಿದೆ. ಸ್ತ್ರೀಯಾದವಳು ಯಾವಾಗಲೂ ಪುರುಷನಿಗೆ ವಿಧೇಯಳಾಗಿಯೇ ಬದುಕಬೇಕಾಗಿದೆ. ಆಕೆಯಲ್ಲಿ ಸದಾ ದಯಾಭಾವನೆ ಇರಬೇಕು. ಪತಿಯೇ ದೈವ ಎಂದು ಸತಿಯ ಸೌಭಾಗ್ಯ ಎನ್ನುವ ಭಾವನೆ ಆಕೆಯಲ್ಲಿ ಮೂಡಿಸಲಾಗಿದೆ. ಪತ್ನಿಯಾದವಳು ಸದಾಪತಿಯ ಚಿಂತೆಯಲ್ಲಿಯೇ ಇರಬೇಕು, ಸದಾ ಆತನ ಶ್ರೇಯಸ್ಸನ್ನು ಬಯಸಬೇಕು, ಆತ ಊಟಮಾಡಿದ ನಂತರವೇ ಊಟಮಾಡಬೇಕು. ಸದಾ ಪತಿಯ ಪಾದಸೇವೆ ಮಾಡಬೇಕು. ಈ ರೀತಿ ಮಾಡುವುದರಿಂದ ಅವಳಿಗೆ ಪುಣ್ಯ ದೊರೆಯುತ್ತದೆ ಎಂದು ಅವಳನ್ನು ನಂಬುವಂತೆ ಮಾಡಲಾಗಿದೆ.

ಪುರುಷನ ವಿಷಯದಲ್ಲಿ ವೈವಾಹಿಕ ಸಂಬಂಧ ಹೆಂಡತಿ ಸಾಯುವವರೆಗೆ ಮಾತ್ರವೇ ಇದೆ. ಆದರೆ ಸ್ತ್ರೀಯಾದವಳು ಗಂಡ ಸತ್ತಮೇಲೂ ಅವಳು ಸಾಯುವವರೆಗೆ ಆ ಸಂಬಂಧವನ್ನು ಪವಿತ್ರವಾಗಿ ಇಟ್ಟುಕೊಳ್ಳಬೇಕಾಗಿದೆ. ಒಂದು ವೇಳೆ ಅವಳು ಬಾಲ್ಯದಲ್ಲಿಯೇ ವಿಧವೆಯಾದರೂ ಸಹ ಸನ್ಯಾಸಿಯ ಜೀವನವನ್ನು ನಡೆಸಬೇಕು ಅಥವಾ ಸಹಗಮನ ಮಾಡಬೇಕಿತ್ತು. ಆಕೆಯ ಶೀಲಕ್ಕೆ ಯಾವುದೇ ರೀತಿಯ ಅಪಚಾರವಾಗದೇ ಆಕೆಯು ಕೊನೆಯವರೆಗೂ ಪತಿವ್ರತೆಯಾಗಿಯೇ ಸಾಯಬೇಕು. ಆಕೆ ಮರುಮದುವೆ ಮಾಡಿಕೊಳ್ಳುವಂತಿರಲಿಲ್ಲ. ಮರು ಮದುವೆಯ ಬಗ್ಗೆ ಯೋಚನೆ ಸಹ ಮಾಡುವಂತಿರಲಿಲ್ಲ. ಪತಿಯಿಲ್ಲದ ಜೀವನ ಬರಡು, ಶೂನ್ಯ, ಬಾಳಿದರೆ ಮುತ್ತೈದೆಯಾಗಿಯೇ ಬಾಳಿ ಗಂಡನಿಗಿಂತ ಮೊದಲೇ ಸತ್ತರೆ ಅವಳು ತನ್ನ ಬಾಳಿಗೆ ಅರ್ಥಬರುವುದು ಎಂದು ತಿಳಿದಿದ್ದಾಳೆ.

ಈ ಎಲ್ಲಾ ಭಾವನೆಗಳಿಗೆ ಪ್ರಭಾವಿತರಾಗಿರುವುದರಿಂದ ಅವರು ಮುತ್ತೈದೆಯರಾಗಿಯೇ ಸಾಯಲು ಬಯಸುವರು. ಋತುಮತಿಯರಾಗುವ ಮೊದಲೇ ವಿವಾಹ ಮಾಡುವುದರಿಂದ ಅವರು ತಮ್ಮ ಪಾತಿವ್ರತ್ಯಕ್ಕ ಹೆಚ್ಚುಗಮನ ಕೊಡುವುದರ ಜೊತೆಗೆ ಪತಿಗೆ ಎಲ್ಲಾ ರೀತಿಯಿಂದಲೂ ವಿಧೇಯಳಾಗಿರಬೇಕೆಂದು ನಿಯಮವಿಧಿಸಲಾಗಿದೆ. ವಿವಾಹ ವಿಚ್ಛೇದನೆ, ವಿಧವೆಯರು ಮರುವಿವಾಹವಾಗುವುದನ್ನು ಸ್ತ್ರೀಯರಿಗೆ ಸಂಪೂರ್ಣವಾಗಿ ನಿಷೇಧೀಸಲಾಗಿದೆ. ಸ್ತ್ರೀಯು ತನ್ನ ಪತಿಯ ಸಾವಿನ ನಂತರ ಜೀವಿಸಲು ಯೋಗ್ಯಳಲ್ಲ ಎಂಬ ಭಾವನೆ ಆಕೆಯಲ್ಲಿ ಬರುವಂತೆ ಮಾಡಿ ಪಾತಿವ್ರತ್ಯದ ವೈಭವೀಕರಣದ ಮೂಲಕ ಸತಿಸಹಗಮನ ಪದ್ಧತಿ ರೂಢಿಗೆ ಬಂದಿತು. ಸಹಗಮನ ಪದ್ಧತಿಯನ್ನು ನಿಷೇಧಿಸಿದ ನಂತರ ಅವಳು ವಿಧವೆಯಾಗಿ ಜೀವನವನ್ನು ನಡೆಸಬೇಕಾಯಿತು. ಈ ರೀತಿ ವಿಧವೆಯರಾಗಿ ಜೀವಂತ ಇರುವುದರಿಂದ ಅವರಿಗೆ ಅನೇಕ ರೀತಿಯ ಕಟ್ಟುಪಾಡುಗಳನ್ನು ವಿಧಿಸಲಾಗಿದೆ. ಬ್ರಾಹ್ಮಣರು ವಿಧವೆಯರಿಗೆ ಕೇಶಮುಂಡನವನ್ನು

ಮಾಡಿಸುತ್ತಿದ್ದರು. ಬಿಳಿ ಅಥವಾ ಕೆಂಪು ಬಟ್ಟೆಗಳನ್ನು ಮಾತ್ರ ಅವರು ಉಪಯೋಗಿಸಬೇಕಿತ್ತು. ಮತ್ತು ಉಪವಾಸ ವ್ರತಗಳು ಮತ್ತು ಸದಾ ದೇವರ ಭಜನೆಯಲ್ಲಿಯೇ ಅವರು ಕಾಲವನ್ನು ಕಳೆಯಬೇಕಾಯಿತು. ಗಂಡ ಎಷ್ಟೇ ಕೆಟ್ಟವನಾದರೂ ಸಹ ಹೆಂಡತಿಯನ್ನು ಬಿಟ್ಟು ಬಿಟ್ಟಿದ್ದರು ಸಹ ಅವಳು ಅವನನ್ನೇ ನಂಬಿ ಹಾಗೆಯೇ ತನ್ನ ಜೀವನವನ್ನು ಕಳೆಯಬೇಕು. ಸಂಸಾರದಲ್ಲಿ ಸಂತೋಷವಿರಲಿ ದುಃಖವಿರಲಿ ಅದನ್ನು ತಾಳ್ಮೆಯಿಂದ, ಮೌನವಾಗಿ ಅನುಭವಿಸಬೇಕು. ಅದು ನಿಜವಾಗಿಯೂ ಸ್ತ್ರೀಯ ಧರ್ಮ ಎಂದು ಅವಳ ಮನದಲ್ಲಿ ಮೂಡುವಂತೆ ಮಾಡಲಾಗಿದೆ. ಇವೆಲ್ಲವು ಮಹಿಳೆಗೆ ಸಾಮಾಜೀಕರಣದ ಮೂಲಕವೇ ತರಬೇತಿ ನೀಡಲಾಗಿದೆ.

ಈ ಪ್ರಕ್ರಿಯೆಯಲ್ಲಿಯೇ ಅವಳು ವೈವಾಹಿಕ ಸ್ಥಿತಿಗೆ ಅನುಗುಣವಾಗಿ ಅವಳ ಮೇಲೆ ಹೇರಿರುವ ಎಲ್ಲ ನಿಯಮಗಳನ್ನು ಅನುಸರಿಸಬೇಕಾಗಿದೆ. ಅವಳು ತನ್ನ ಜೀವನದಲ್ಲಿ ಯಾವುದೇ ಬಗೆಯ ಆಸೆಯನ್ನು ಇಟ್ಟುಕೊಳ್ಳದೆ ಬದುಕಬೇಕಾಗಿದೆ. ಬಾಲ್ಯದಲ್ಲಿಯೇ ವಿಧವೆಯಾಗುವುದರಿಂದ ನಿಸರ್ಗ ಸಹಜವಾಗಿ ಇರುವ ಲೈಂಗಿಕತೆಯ ಮೇಲೆ ಇವಳು ನಿಯಂತ್ರಣವನ್ನು ಹೇರಬೇಕಾಗಿದೆ. ಪುರುಷನು ಯಾವಾಗಬೇಕಾದರು ಲೈಂಗಿಕ ತೃಪ್ತಿಯನ್ನು ಪಡೆಯಬಹುದು. ಆದರೆ ಸ್ತ್ರೀಯು ತಾನಾಗಿಯೇ ಈ ತೃಪ್ತಿಯನ್ನು ತಿರಿಸಿ ಕೊಳ್ಳಬಾರದು. ಮದುವೆ ಆದರೂ ಅಷ್ಟೇ, ಮದುವೆ ಆಗದೆ ಇದ್ದರು ಅಷ್ಟೇ, ವಿಧವೆಯಾದರು ಸಹ ಇಡೀ ಸಮಾಜ ಹೇಳುವುದು ಅವಳು ತನ್ನ ಲೈಂಗಿಕತೆಯನ್ನು ಯಾರಲ್ಲೂ ತಿರಿಸಿಕೊಳ್ಳಬಾರದು ಎಂದು. ಆದರೆ ಗಂಡ ಬಯಸಿದಾಗ ಮಾತ್ರ ಹೆಂಡತಿಯಾದವಳೂ ತನಗೆ ಒಪ್ಪಿಗೆ ಇಲ್ಲದಿದ್ದರೂ ಸಹ ಅವನನ್ನು ಸಂತೋಷಪಡಿಸಬೇಕು. ಹೆಣ್ಣಿನ ದೇಹ, ಮನಸ್ಸು, ಬುದ್ಧಿ ಎಲ್ಲವನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದಾನೆ. ಹೆಂಗಸು ತನ್ನ ಆಸೆಯನ್ನು ವ್ಯಕ್ತಿಪಡಿಸಬಾರದು. ಸಮಾಜ ಹೇಳಿದ ರೀತಿಯಲ್ಲಿಯೇ, ಅವಳ ಜೀವನ ಒತ್ತೆ ಇಟ್ಟು ಬದುಕಬೇಕಾಗಿದೆ. ಅಂದರೆ ಅವಳ ಲೈಂಗಿಕತೆ ಇಂತಹ ಸಂದರ್ಭದಲ್ಲಿ, ಇಂಥ ಗಂಡನ ಜೊತೆ ಮಾತ್ರ ಬಳಸಿಕೊ ಎಂದು ಸಮಾಜ ಹೇಳಿದೆ. ಅವಳ ಪತಿಯು ಸತ್ತಿದ್ದರೆ ಅವಳ ಲೈಂಗಿಕತೆಯಲ್ಲಿ ತೊಡಗಬಾರದು ಎಂದು ಸಮಾಜ ಅವಳ ಮೇಲೆ ಕ್ರೂರವಾಗಿ ದಾಳಿ ಮಾಡಿದೆ.

ವಿಧವೆಯಾದ ಮೇಲೆ ಅವಳಿಗೆ ಯಾವುದೇ ರೀತಿಯ ಹಕ್ಕು ಬಾಧ್ಯತೆಗಳು ದೊರೆಯುವುದಿಲ್ಲ. ವಿವಾಹದ ಮೂಲಕ ಪತಿಯು ಜೀವಿತವಿರುವವರೆಗಾದರೂ ಅವಳಿಗೆ ಸಣ್ಣಪುಟ್ಟ ಹಕ್ಕುಗಳು ಮನೆಯಲ್ಲಿ ವಾಸಮಾಡಲು ಸ್ಥಳಸಿಗುವುದು ವಿಧವೆಯಾದ ಮೇಲೆ ಅವಳು ಯಾವ ಮನೆಯಲ್ಲಿ ಬದುಕಬೇಕು ಎನ್ನುವುದೇ ಒಂದು ದೊಡ್ಡ ಸಮಸ್ಯೆಯಾಗಿ ಕಾಡುತ್ತದೆ. ವಿಧವೆಯಾದ ಮಹಿಳೆಯು ಸ್ವತಂತ್ರವಾಗಿ ಬದುಕಿದರೆ ಸಾಕು ಸಮಾಜ ಅವಳನ್ನು ನಿಂದಿಸಲು ಪ್ರಾರಂಭಿಸುವರು. ಸಮಾಜವು ಅವಳಿಗೆ ಯಾವುದೇ ರೀತಿಯಿಂದ ನಿಶ್ಚಿಂತವಾಗಿ, ಧೈರ್ಯದಿಂದ ಸ್ವತಂತ್ರವಾಗಿ ಬದುಕಲು ಬಿಡುವುದಿಲ್ಲ. ಈ ರೀತಿಯಾಗಿ

ವಿಧವೆಯು ಸ್ವತ ತನ್ನ ಬದುಕು ಹೀಗೆ ನಾನು ಹೀಗೆಯೇ ಬದುಕಬೇಕು ಎನ್ನುವ ಹಾಗೆ ತನ್ನನ್ನೇ ತಾನು ಒಪ್ಪಿಕೊಂಡಿದ್ದಾಳೆ ಈ ರೀತಿ ಅವಳು ವಿಧವೆಯಾದ ಮೇಲೆ ಹೀಗೆಯೇ ಜೀವನ ನಡೆಸಬೇಕು ಎನ್ನುವುದಕ್ಕೆ ಸಾಮಾಜೀಕರಣದ ಮೂಲಕ ಕುಟುಂಬ, ಶಿಕ್ಷಣ, ಧರ್ಮ, ಸಂಸ್ಕೃತಿಯು ಅವಳ ಮೇಲೆ ಹೇರಿದ ನಿಯಮಗಳಿಂದ ಅವಳಿಗೆ ಚಿಕ್ಕವಳಿರುವಾಗಿನಿಂದ ತರಬೇತಿಯನ್ನು ನೀಡಿರುವುದರಿಂದ ಅವಳು ನನ್ನ ಜೀವನವೇ ಇದು ನಾನು ಹೀಗೆಯೇ ಬದುಕಬೇಕು ಎಂದು ಒಪ್ಪಿಕೊಂಡಿದ್ದಾಳೆ. ಅವಳಿಗೆ ಚಿಕ್ಕಂದಿನಿಂದಲೇ ತರಬೇತಿಯನ್ನು ನೀಡಿರುವುದರಿಂದ ಅವಳು ತನ್ನ ಹಕ್ಕುಗಳ ಬಗ್ಗೆ ಯೋಚನೆ ಮಾಡುವುದಾಗಲಿ ಮರು ಪ್ರಶ್ನಿಸುವುದಾಗಲಿ ಮಾಡದೆ ಅವಳು ಈ ನಿಯಮಗಳಿಗೆ ಒಪ್ಪಿಕೊಂಡು ಜೀವನವನ್ನು ನಡೆಸುತ್ತಿದ್ದಾಳೆ.

ಭಾರತದ ವಿವಿಧ ಧರ್ಮಗಳು ವಿಧವೆಯರ ಸಮಸ್ಯೆಗಳು, ಅವರ ಸ್ಥಾನಮಾನಗಳು, ಅವರ ಮೇಲೆ ಹೇರಿರುವ ನಿಯಮಗಳನ್ನು ಧರ್ಮವು ಹೇಗೆ ಪುಷ್ಟಿಕರಿಸುತ್ತದೆ ಎನ್ನುವುದನ್ನು ಮುಂದಿನ ಅಧ್ಯಯನದಲ್ಲಿ ವಿವರಿಸಲಾಗಿದೆ.

**ಅಡಿಟಿಪ್ಪಣಿ**

೧. ಚ.ನ.ಶಂಕರರಾವ್, ಸಾಮಾಜಿಕ ಪ್ರಕ್ರಿಯೆ ಮತ್ತು ಸಾಮಾಜಿಕ ಪರಿವರ್ತನೆ, ಪು.೮೩

೨. ಎಂ.ನಾರಾಯಣ, ಸಮಾಜ ಶಾಸ್ತ್ರ, ಬುಕ್‌ಹೌಸ್, ಮೈಸೂರು, ೧೯೮೯, ಪು.೭೫-೭೬

೩. ಇಂದಿರಾ ಆರ್., ಮಹಿಳೆ ಮತ್ತು ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ,೨೦೦೨, ಪು.೫೦

೪. ಅದೇ, ಪು.೧೫

೫. ನಾರಾಯಣ ಎಂ., ಸಮಾಜಶಾಸ್ತ್ರ, ಚೇತನ ಬುಕ್‌ಹೌಸ್, ಮೈಸೂರು ೧೯೮೯, ಪು.೭೨-೭೩

ಜಗತ್ತಿನಲ್ಲಿ ಇಂದಿನವರೆಗೂ ಜನರ ಜೀವನ ವಿವಾಹ ಸಂಸ್ಥೆ ಹಾಗೂ ಸಂಸ್ಕೃತಿಯ ಮೇಲೆ ಧರ್ಮ ಎನ್ನುವ ಸಂಸ್ಥೆಯು ಪ್ರಭಾವ ಬೀರುತ್ತಲೇ ಇದೆ. ಧರ್ಮವು ಸಮಾಜದ ಒಂದು ಅವಿಭಾಜ್ಯ ಅಂಗವಾಗಿದೆ. ಆದುದರಿಂದಲೇ ಧರ್ಮವು ಸಮಾಜದ ಸ್ವರಕ್ಷಣೆಗಾಗಿ ಬಳಸುವ ಒಂದು ಸಂಸ್ಥೆಯಾಗಿದೆ. ಜೀವನದಲ್ಲಿ ಎದುರಾಗುವ ವಿವಿಧ ಸನ್ನಿವೇಶಗಳಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ಎಚ್ಚರಿಕೆ ನೀಡುವಂಥಹದ್ದಾಗಿದೆ. ಮತ್ತು ನಿಯಮಕ್ಕೆ ವಿರುದ್ಧವಾದ ನಡವಳಿಕೆಗಳಿಗೆ ಸಮಾಜವು ಹೇಗೆ ಪ್ರತಿಕ್ರಿಯೆ ತೋರಬೇಕೆಂದು ನಿರ್ದೇಶಿಸುವ ವ್ಯವಸ್ಥೆಯೇ ಧರ್ಮಕ್ಕಿದೆ. ಧರ್ಮದ ಪ್ರಮುಖ ಲಕ್ಷಣಗಳೆಂದರೆ ನಂಬಿಕೆ ಮತ್ತು ಆಚರಣೆಗಳು. ಧರ್ಮವು ಸಮಾಜವನ್ನು ರಕ್ಷಿಸುತ್ತದೆಯೆಂಬ ನಂಬಿಕೆ ಜನರಲ್ಲಿ ಅಪಾರವಾಗಿದೆ. ಅದುದರಿಂದಲೇ ವಿಶೇಷ ಸಂದರ್ಭಗಳಲ್ಲಿ ಅನುಸರಿಸಬೇಕಾದ ವಿಧಿ ವಿಧಾನಗಳನ್ನು ಧರ್ಮ ನಮಗೆ ತಿಳಿಸಿಕೊಡುವುದರ ಜೊತೆಗೆ ಜೀವನದಲ್ಲಿ ಎದುರಾಗುವ ಸಮಸ್ಯೆಗಳಿಗೆ ಪರಿಹಾರವು ಧರ್ಮದಿಂದಲೇ ದೊರೆಯುತ್ತದೆ. ಒಟ್ಟಾರೆಯಾಗಿ ದೈಹಿಕ ಮತ್ತು ಮಾನಸಿಕವಾಗಿ ಆರೋಗ್ಯವಂತರಾಗಲು ವ್ಯಕ್ತಿಗೆ ನೆರವಾಗುವಂಥಹ ಶಕ್ತಿಗಳಲ್ಲಿ ಧರ್ಮವೂ ಒಂದಾಗಿದೆ.

ಧರ್ಮವು ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಇದರ ಪಾತ್ರ ಮಹತ್ವದ್ದಾಗಿದೆ. ಧರ್ಮಗಳು ಹಲವಾರು ಇದ್ದರೂ ಎಲ್ಲಾ ಧರ್ಮಗಳು ದಯೆ, ಪ್ರಾಮಾಣಿಕತೆ, ಗುರುಹಿರಿಯರಲ್ಲಿ ಗೌರವ, ಶ್ರದ್ಧೆ, ನ್ಯಾಯ-ಅನ್ಯಾಯ, ಶಿಸ್ತು, ಸಾಮಾಜಿಕ ಕಾಳಜಿ, ಆಚರಣೆಗಳು, ನಂಬಿಕೆಗಳಂಥ ಮೌಲ್ಯಗಳನ್ನು ಒಳಗೊಂಡಿರುತ್ತದೆ. ಪ್ರತಿಯೊಂದು ಧರ್ಮಕ್ಕೂ ಧರ್ಮದ ಮೂಲತತ್ವಗಳನ್ನೊಳಗೊಂಡ ಧರ್ಮಗ್ರಂಥಗಳು ಇದ್ದು, ಜನರ ಜೀವನವನ್ನು ಈ ಗ್ರಂಥಗಳಲ್ಲಿ ಒಳಗೊಂಡಿದೆ. ಧರ್ಮ ಎನ್ನುವ ಸಂಸ್ಥೆಯು ಸಾಮಾಜಿಕ ಮೌಲ್ಯಗಳನ್ನು ರೂಪಿಸುವಲ್ಲಿ ಹಾಗೂ ಆಚರಣೆಗಳನ್ನು ನಿರ್ದೇಶಿಸುವಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿರುವುದರಿಂದ, ಮಹಿಳೆಯರನ್ನು ಕುರಿತ ಸಮಾಜದ ಧೋರಣೆಗಳು ಯಾವ ಸ್ವರೂಪವನ್ನು ಪಡೆಯುತ್ತವೆ ಎಂಬುದನ್ನು ಪ್ರಭಾವಿಸುತ್ತದೆ.

ಧರ್ಮವು ಹೆಚ್ಚಾಗಿ ಪುರುಷ ಪ್ರಧಾನವಾಗಿದ್ದು, ಪುರುಷರ ಚಿಂತನೆಯಲ್ಲಿಯೇ ಉಗಮವಾಗಿದೆ. ಪುರುಷರ ನಿಯಂತ್ರಣದಲ್ಲಿಯೇ ಬೆಳೆದು ಬಂದಿರುವುದರಿಂದ ಪುರುಷನು ಪ್ರಥಮ ದರ್ಜೆಯ ಪ್ರಜೆಯಾಗಿ ಸ್ತ್ರೀಯನ್ನು ಎರಡನೆಯ ದರ್ಜೆಯ ಪ್ರಜೆಯನ್ನಾಗಿ ಮಾಡಿದೆ. ಸ್ತ್ರೀಯನ್ನು ಒಂದು ಕಡೆ ಮಾತೆ, ದೇವತೆಯೆಂದು ಪೂಜಿಸಿದ್ದಾರೆ. ಇನ್ನೊಂದು ಕಡೆ ಆಕೆಗೆ ಯಾವುದೇ ರೀತಿಯ ಸ್ವತಂತ್ರವನ್ನು ಕೊಡದೆ

ಚಂಚಲೆ, ಮಾಯೆ, ಮೋಸಗಾರ್ತಿಯೆಂದು ತಿಳಿಸಿದ್ದಾರೆ. ಅವಳಿಗೆ ಸ್ವತಂತ್ರವಾದ ವ್ಯಕ್ತಿತ್ವ ಇದೆ ಎನ್ನುವುದನ್ನೆ ಮರೆತಿದ್ದಾರೆ. ಧರ್ಮಗಳು ಮಾನವೀಯ ಮೌಲ್ಯಗಳಿಗೆ ಮಹತ್ವವಾದಂಥ ಸ್ಥಾನಮಾನವನ್ನು ನೀಡಿದ್ದರೂ ವಾಸ್ತವದಲ್ಲಿ ಅದು ಮಹಿಳೆಯರ ವಿರುದ್ಧ ನಡೆಯುವ ಅನೇಕ ದೌರ್ಜನ್ಯಗಳಿಗೆ ಧರ್ಮವು ಬೆಂಬಲ ನೀಡಿದೆ. ಧರ್ಮವು ಮಹಿಳೆಯರಿಗೆ ಹಲವು ಹಕ್ಕುಗಳನ್ನು ನೀಡಿದೆ ಆದರೆ ಅವರ ಮೇಲೆ ಅನೇಕ ನಿರ್ಬಂಧನೆಗಳನ್ನು ಹೇರಲಾಗಿದೆ. ಮಹಿಳೆಯರಿಗೆ ಜವಬ್ದಾರಿಗಳನ್ನು ಮಾತ್ರ ವಿಧಿಸಲಾಗಿದೆ. ಅವಳು ಧಾರ್ಮಿಕ ವಿಧಿಗಳಲ್ಲಿ ಪುರುಷನಿಗೆ ಸಹಭಾಗಿಯಾಗಬಹುದೇ ಹೊರತಾಗಿ ಅವಳು ಸ್ವತಂತ್ರವಾಗಿ ಧಾರ್ಮಿಕ ಕಾರ್ಯಗಳನ್ನು ಮಾಡುವಂತಿರಲಿಲ್ಲ. ಮಹಿಳೆಗೆ ಪ್ರಕೃತಿದತ್ತವಾಗಿ ಬಂದಂತಹ ಮುಟ್ಟು, ಶಿಶುಜನನ, ವೈಧವ್ಯದಂಥಹ ಸಂದರ್ಭಗಳಲ್ಲಿ ಅವಳನ್ನು ಅವಮಾನಗೊಳಿಸಲಾಗಿದೆ. ಅಲ್ಲದೆ ಅವಳಿಗೆ ಆಸ್ತಿಯ ಹಕ್ಕನ್ನು ಮತ್ತು ಉತ್ತರಾಧಿಕಾರದ ಹಕ್ಕನ್ನು ಸಹ ನಿರಾಕರಿಸಲಾಗಿದೆ. ಈ ರೀತಿಯಾಗಿ ಜಗತ್ತಿನ ಎಲ್ಲಾ ಧರ್ಮಗಳಲ್ಲಿ ಪುರುಷನ ಪ್ರಾಧಾನ್ಯತೆಯನ್ನು ಎತ್ತಿ ಹಿಡಿದು ಸ್ತ್ರೀಯ ಪರಾಧಿನತೆಯನ್ನೆ ಬೆಂಬಲಿಸಲಾಗಿದೆ. ಕಾರಣ ಧರ್ಮವು ಸ್ತ್ರೀಯನ್ನು ವಿರೋಧಿ ದೃಷ್ಟಿಕೋನದಿಂದಲೇ ಕಂಡಿದೆ.

ಧರ್ಮದ ಹೆಸರಿನಲ್ಲಿ ಮಹಿಳೆಯ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗಿದೆ. ಸತಿಸಹಗಮನ, ಕೇಶಮುಂಡನ, ವಿಧವೆಯರು ಧಾರ್ಮಿಕ ಕಾರ್ಯಗಳಲ್ಲಿ ಪಾಲ್ಗೊಳ್ಳದಂತೆ ಮಾಡಲಾಗಿದೆ. ಒಂದು ವೇಳೆ ಅವಳು ಧಾರ್ಮಿಕ ಕಾರ್ಯಗಳಲ್ಲಿ ಪಾಲ್ಗೊಂಡರೆ ಅವಳನ್ನು ಅಪಶಕುನ ಎನ್ನುವರು. ಗಂಡನು ಸತ್ತ ಮೇಲೆ ಮುತ್ತೈದೆ, ಸೌಭಾಗ್ಯವತಿ ಮತ್ತು ಪಾತಿವ್ರತ್ಯದ ಕಲ್ಪನೆಮೂಡಿಸಿ ಅವರನ್ನು ಜೀವಂತ ಚಿತೆಗೆರುವಂತೆ ಧರ್ಮವು ಮಹಿಳೆಯರನ್ನು ಪ್ರೇರೇಪಿಸಿದೆ. ಗಂಡನೆ ಸರ್ವಸ್ವ, ಅವನೆ ದೇವರು, ಅವನು ಎಷ್ಟೇ ಕ್ರೂರಿಯಾಗಿದ್ದರೂ ಆತನನ್ನು ತ್ಯಜಿಸಬಾರದು, ಆತನಿಗೆ ಎದುರುತ್ತರ ಕೊಡಬಾರದು, ಆತನು ಹೇಳಿದ ಹಾಗೆ ಇವಳು ಬದುಕಬೇಕು. ವಿಧವೆಯಾದ ಮೇಲೆ ಅವಳು ಜೀವನವಿಡಿ ಜೀವಂತ ಶವವಾಗಿ ಬಾಳಬೇಕೆಂದು ವಿವಾಹ ಎನ್ನುವ ಸಂಸ್ಥೆಯ ಮೂಲಕ ಧರ್ಮವು ಮಹಿಳೆಯ ಮೇಲೆ ನಿಯಮಗಳನ್ನು ಹೇರಿದೆ.

ಧರ್ಮವು ಪುರುಷನಿಗೆ ಸ್ವತಂತ್ರವಾಗಿ ಜೀವನವನ್ನು ನಡೆಸಲು ಅನುಕೂಲ ಒದಗಿಸಿದೆ. ಪುರುಷನಾದವನು ಹೆಂಡತಿಯನ್ನು ಕಳೆದುಕೊಂಡ ಕೆಲವೇ ದಿನಗಳಲ್ಲಿ ಮದುವೆಯಾಗಬಹುದು. ಆದರೆ ಮಹಿಳೆಯಾದವಳು ಅದರಲ್ಲೂ ವಿಧವೆಯಾದವಳು ಗಂಡ ಸತ್ತ ಮೇಲೆ ಒಂದೊತ್ತು ಮಾತ್ರ ಊಟ ಮಾಡಿ ತನ್ನ ಶರೀರದಲ್ಲಿರುವ ಸತ್ವವನ್ನು ಕಳೆದುಕೊಳ್ಳುವಂತೆ ಮಾಡಿದೆ. ಅವಳು ಸದಾ ದೇವರಧ್ಯಾನದಲ್ಲಿಯೇ ಮಗ್ನಳಾಗಿರಬೇಕು. ಕನಸಲ್ಲು ಸಹ ಮದುವೆಯ ಬಗ್ಗೆ ಯೋಚಿಸುವುದು ಮಹಾಪಾಪ ಎಂದು ಅವಳ ಎಲ್ಲಾ ಅಲಂಕಾರ ವಸ್ತುಗಳಾದ ಬಳೆ, ಕುಂಕುಮ, ಹೂ, ಕಾಲುಂಗುರ, ತಾಳಿ ತೆಗೆದು, ತಲೆಯನ್ನು

ಬೋಳಿಸಿಕೊಂಡು ಜನರಿಗೆ ವಿಕಾರವಾಗಿ ಕಾಣುವಂತೆ ಧರ್ಮವು ವಿಧವೆಯಾದವಳ ಮೇಲೆ ನಿಯಮಗಳನ್ನು ಹೇರಿದೆ. ಈ ರೀತಿಯ ವೈಧವ್ಯದ ಆಚರಣೆಗಳನ್ನು ಪುರುಷ ಸಂಸ್ಕೃತಿಯು ಸ್ತ್ರೀಯರ ಮೇಲೆ ಹೇರಿರುವ ವಿಕೃತವಾದ ಪದ್ಧತಿಯಾಗಿದೆ. ಧರ್ಮಗಳು ಸ್ತ್ರೀಯರ ಮೇಲೆ ಹೇರಿರುವ ಈ ಕಟ್ಟುಪಾಡನ್ನು ಸ್ತ್ರೀಯರು ಚಾಚು ತಪ್ಪದೆ ಪಾಲಿಸುತ್ತ ಬಂದಿದ್ದಾರೆ. ವೈಧವ್ಯವು ಸ್ತ್ರೀಯರ ಲೈಂಗಿಕತೆಯ ಮೇಲೆ ಹೇರಿರುವ ಕಟ್ಟುಪಾಡಾಗಿದೆ. ಇದು ಪುರುಷನ ಪ್ರಾಧಾನ್ಯತೆ, ಜಾತಿಯ ಶುದ್ಧತೆಯನ್ನು ಕಾಪಾಡಿಕೊಳ್ಳುವುದರ ಜೊತೆಗೆ ಆಸ್ತಿಯ ರಕ್ಷಣೆಯನ್ನು ಒಳಗೊಂಡಿದೆ. ಈ ರೀತಿ ಧರ್ಮವು ಮಹಿಳೆಯರ ಮೇಲೆ ಕಟ್ಟುಪಾಡುಗಳನ್ನು ಹೇರಿ ಅವಳ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿದೆ ಹೂ, ಬಳೆ, ಕುಂಕುಮ ತೆಗೆಯುವ ವೈಧವ್ಯದ ಸಂಕೇತಗಳನ್ನು ಆಳವಾಗಿ ಬೇರೂರಿಸುವುದರ ಮೂಲಕ ಲೈಂಗಿಕ ನಿಷ್ಠೆಯನ್ನು ನಿರೀಕ್ಷಿಸಲಾಗಿದೆ. ಈ ರೀತಿ ವೈಧವ್ಯದಂಥಹ ಅಮಾನುಷ ಆಚರಣೆಗಳನ್ನು ಸ್ತ್ರೀಯರೆ ನಂಬುವಂತೆ ಮಾಡಿದೆ. ಒಂದು ವೇಳೆ ಮಹಿಳೆಯಾದವಳು ಅಂದರೆ ವಿಧವೆಯು ಅವರ ವಿರುದ್ಧ ನಡೆದುಕೊಂಡರೆ ಶಿಕ್ಷೆ ವಿಧಿಸಲಾಗಿದೆ. ಈ ರೀತಿಯಾಗಿ ಧರ್ಮದ ನಿಯಮಗಳಿಗೆ ಮಹಿಳೆಯಾದವಳು ತನ್ನ ಆಸೆ ಆಕಾಂಕ್ಷೆಗಳನ್ನು ಬದಿಗೊತ್ತಿ ಅವಳು ಪುರುಷ ಚಿಂತನೆಗೆ ಸಹಜವಾಗಿಯೇ ಒಪ್ಪಿಕೊಳ್ಳಬೇಕಾಗಿದೆ. ಹಿಂದೂ ಧರ್ಮ, ಬೌದ್ಧಧರ್ಮ, ಇಸ್ಲಾಂ ಧರ್ಮ, ಮತ್ತು ಕ್ರೈಸ್ತ ಧರ್ಮಗಳಲ್ಲಿ ಕಂಡುಬರುವ ಮಹಿಳೆಯರ ವೈಧವ್ಯದ ಸ್ಥಿತಿಗತಿ ಮತ್ತು ಆಚರಣೆ ಸಂಪ್ರದಾಯಗಳು ಈ ರೀತಿಯಲ್ಲಿ ರೂಪಿತವಾಗಿವೆ.

## ಹಿಂದೂ ಧರ್ಮ

ವೇದಗಳ ಕಾಲದಲ್ಲಿ ಮಹಿಳೆಯು ಪುರುಷನಷ್ಟೇ ಸಮನಾದ ಅಧಿಕಾರವನ್ನು ಪಡೆದಿದ್ದಳು. ವೇದಗಳ ಕಾಲದಲ್ಲಿಯೇ ಮುಖ್ಯವಾಗಿ ಋಗ್ವೇದದ ಕಾಲದಲ್ಲಿ ಸ್ತ್ರೀ ಮತ್ತು ಪುರುಷರಿಗೆ ಸಮಾನವಾದ ಸ್ಥಾನಮಾನಗಳಿದ್ದವು. ಸ್ತ್ರೀಯಾದವಳು ಸಹ ವಿದ್ಯೆಯನ್ನು ಪಡೆಯುತ್ತಿದ್ದಳು. ಅಲ್ಲದೆ ಪ್ರೌಢ ವಯಸ್ಸಿಗೆ ಬಂದಾಗ ವಿವಾಹವಾಗಿ ಕುಟುಂಬದ ಹೊಣೆಗಾರಿಕೆಯನ್ನು ನಿರ್ವಹಿಸುತ್ತಿದ್ದರು. ವೇದಗಳ ಕಾಲದಲ್ಲಿ ಸ್ತ್ರೀಯರಿಗೆ ವಿವಾಹವು ಅನಿವಾರ್ಯವಾದ ಹಾಗೂ ಕಡ್ಡಾಯವಾದ ಸಂಸ್ಕಾರವಾಗಿರದೆ ಅವರು ಅವಿವಾಹಿತರಾಗಿಯೇ ಉಳಿದು ತಂಗಿ-ತಾಯಿಯರ ಜೊತೆಯಲ್ಲಿಯೆ ತಂದೆಯ ಮನೆಯಲ್ಲಿ ಆಶ್ರಯ ಪಡೆಯುತ್ತಿದ್ದರು. ಗಂಡು ಮಕ್ಕಳಿಗೆ ಹೇಗೆ ಆಸ್ತಿಯಲ್ಲಿ ಸಮಪಾಲು ಸಿಗುತ್ತಿತ್ತೊ ಹಾಗೆಯೇ ಸ್ತ್ರಿಯರಿಗೂ ಸಹ ಆಸ್ತಿಯಲ್ಲಿ ಸಮಪಾಲು ಸಿಗುತ್ತಿತ್ತು. ಸ್ತ್ರೀಯರು ತಮಗೆ ಬೇಕಾದಂಥಹ ಮತ್ತು ತಮಗೆ ಒಪ್ಪುವಂತಹ ಯುವಕನನ್ನು ಆಯ್ಕೆ ಮಾಡಿಕೊಂಡು ಮದುವೆಯಾಗುವ ಅಧಿಕಾರವನ್ನು ಹೊಂದಿದ್ದಳು. ಇಷ್ಟೇಲ್ಲ ಮಹಿಳೆಗೆ ಸ್ವಾತಂತ್ರ್ಯವಿದ್ದರು ಸಹ ಅವಳು ತನ್ನ ಶೀಲ ಮತ್ತು ಪಾವಿತ್ರ್ಯ, ಗೌರವಗಳನ್ನು ನಿಷ್ಠೆಯಿಂದ ಕಾಯ್ದುಕೊಳ್ಳುತ್ತಿದ್ದಳು.

"ಋಗ್ವೇದದ ಕಾಲದಲ್ಲಿ ಬಾಲ್ಯವಿವಾಹವು ರೂಢಿಯಲ್ಲಿರಲಿಲ್ಲ. ಪೂರ್ಣವಾಗಿ ಬೆಳೆದ ಮೇಲೆಯೆ ಅವರು ವಿವಾಹವಾಗುತ್ತಿದ್ದರು. ವಿವಾಹವಾದ ನಂತರ ಪತಿಯ ಮನೆಯನ್ನು ಸೇರಿದ ಹೆಣ್ಣುಮಗಳು ಗೌರವಾನ್ವಿತ ಸ್ಥಾನವನ್ನು ಪಡೆದು ಎಲ್ಲ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದಳು. ಅಲ್ಲದೆ ವಿಧವಾ ಸ್ತ್ರೀಯರ ಮೇಲೆಯೂ ಕೂಡ ಕಟ್ಟುನಿಟ್ಟಾದ ನಿಷೇಧಗಳನ್ನು ಹೇರಿರಲಿಲ್ಲ. ವಿಧವಾ ಪುನರ್ವಿವಾಹಕ್ಕೆ ಅವಕಾಶವನ್ನು ನೀಡಲಾಗಿತ್ತು. ಇದು ಋಗ್ವೇದದಲ್ಲಿ ಅಲ್ಲದೆ ಅಥರ್ವಣವೇದದಲ್ಲಿಯೂ ವಿಧವೆಯರಿಗೆ ಪುನರ್ವಿವಾಹವಾಗುವ ಅವಕಾಶವಿತ್ತು. ಅಲ್ಲದೆ ಅವರು ಸಮಾಜದಲ್ಲಿ ಒಳ್ಳೆಯ ಸ್ಥಾನಮಾನಗಳನ್ನು ಹೊಂದಿದ್ದರು.[7] ಅಥರ್ವಣವೇದದ ಕಾಲದಲ್ಲಿ ನಿಯೋಗದ ಆಚರಣೆಯು ಇದ್ದಿತು.(ನಿಯೋಗ ಎಂದರೆ ಮಡಿದ ಗಂಡನ ಸೋದರರನ ಸಂಬಂಧದಿಂದ ಮಕ್ಕಳನ್ನು ಪಡೆಯುವುದು) ವಿಧವೆಗೆ ಸ್ವರ್ಗಸ್ಥನಾದ ಗಂಡನ ಸಹೋದರನು ಅವಳನ್ನು ಸಮಾಧಾನಪಡಿಸಿ ವಿವಾಹವಾಗುತ್ತೇನೆಂದು ಹೇಳಿ ಮನೆಗೆ ಕರೆತರುತ್ತಿದ್ದನು. ಗಂಡನ ಸಹೋದರನಲ್ಲದೆ ಬೇರೆಯವರನ್ನು ವಿವಾಹವಾಗುವ ಅವಕಾಶಗಳಿದ್ದವು. ಒಟ್ಟಿನಲ್ಲಿ ಋಗ್ವೇದದ ಕಾಲದಲ್ಲಿ ಮಹಿಳೆಗೆ ಎಲ್ಲ ರೀತಿಯ ಸ್ವಾತಂತ್ರ್ಯಗಳು ದೊರಕಿವೆ. ಆದರೆ ಅಥರ್ವಣವೇದದಲ್ಲಿ ಗಂಡು-ಹೆಣ್ಣುಗಳಲ್ಲಿ ಹೆಣ್ಣಿನ ಪ್ರಾಶಸ್ತ್ಯ ಸ್ವಲ್ಪ ಕುಗ್ಗಿ ಗಂಡಿಗೆ ಹೆಚ್ಚು ಮಹತ್ವ ಕೊಡಲಾಗಿದೆ. ಅಂದಿನಿಂದಲೇ ಸ್ವರ್ಗ ನರಕಗಳು ಹುಟ್ಟಿಕೊಂಡವು. ಮರಣ ಹೊಂದಿದ ಪುರುಷನಿಗೆ ಸ್ವರ್ಗಪ್ರಾಪ್ತಿಯಾಗಲು ಮತ್ತು ಆತನು ಜನ್ಮಜನ್ಮಾಂತರ ಸುಖವಾಗಿರಲು ಆತನಿಗೆ ಮೋಕ್ಷದೊರಕಲು ಸ್ವರ್ಗಕ್ಕೆ ದಾರಿ ಮಾಡಿಕೊಡಲು ಕೆಲವು ಕರ್ಮಗಳನ್ನು ಮಾಡಬೇಕಾಯಿತು. ಈ ಎಲ್ಲಾ ಕರ್ಮಗಳನ್ನು ಮಾಡಬೇಕಾದರೆ ಪುತ್ರ ಸಂತಾನದ ಪ್ರಾಮುಖ್ಯತೆ ತೀವ್ರಗೊಂಡಿತು. ಇದರಿಂದ ಸ್ತ್ರೀಯ ಸ್ಥಾನಮಾನಗಳು ಕೆಳಗಿಳಿದವು. ಪುತ್ರಸಂತಾನವನ್ನು ಪಡೆಯುವುದಕ್ಕಷ್ಟೇ ಸ್ತ್ರೀಯ ಸ್ಥಾನಮಾನ ಸೀಮಿತವಾಯಿತು. ಇದರಿಂದಲೇ ಬಾಲ್ಯವಿವಾಹ ಪದ್ಧತಿಯೂ ರೂಢಿಯಲ್ಲಿ ಬಂದಿತು.

ಪುತ್ರನನ್ನು ಪಡೆಯುವ ವ್ಯಾಮೋಹಕ್ಕಾಗಿ ಅಥರ್ವಣವೇದ ಕಾಲದಲ್ಲಿ ನಿಯೋಗ ಪದ್ಧತಿಯೂ ಜಾರಿಯಲ್ಲಿ ಬಂದಿತು. ವಿಧವೆಯಾದವಳು ಪುನರ್ವಿವಾಹವಾಗದೆ ಇದ್ದರು ಸಹ ಅವಳು ಪುತ್ರ ಸಂತಾನವನ್ನು ಪಡೆಯಲು ಸಮಾಜ ಒಪ್ಪಿಗೆಯನ್ನು ಕೊಟ್ಟಿತ್ತು. ಪತಿಯು ಸತ್ತನಂತರ ಪರಪುರುಷನ ಜೊತೆ ಸಂಪರ್ಕವೇರ್ಪಡಿಸಿ ಪುತ್ರನನ್ನು ಪಡೆಯುವುದಕ್ಕೆ ನಿಯೋಗ ಪದ್ಧತಿ ಎನ್ನುವರು. ಈ ರೀತಿಯಾಗಿ ಹುಟ್ಟಿದ ಪುತ್ರನು ಉತ್ತರ ಕ್ರಿಯಾದಿಗಳನ್ನು ಮಾಡುವ ಅಧಿಕಾರವನ್ನು ಪಡೆದಿದ್ದನು. ಈ ಅಥರ್ವಣವೇದದ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ವಿಧವಾ ವಿವಾಹವಾಗುವುದರ ಮೂಲಕ ಹುಟ್ಟಿದ ಮಕ್ಕಳನ್ನು ಮತ್ತು ನಿಯೋಗ ಪದ್ಧತಿಯಿಂದ ಹುಟ್ಟಿದ ಮಕ್ಕಳನ್ನು ಸಮಾಜ ಹೀನಾಯವಾಗಿ ಕಾಣುತ್ತಿರಲಿಲ್ಲ. ಒಟ್ಟಿನಲ್ಲಿ ಪುತ್ರ ಸಂತಾನದ ಅವಶ್ಯಕತೆ ಅತಿ ಹೆಚ್ಚಾಗಿತ್ತು. ಮೊದಲು

ಹೆಂಡತಿಗೆ ಪುತ್ರಸಂತಾನವಾಗದಿದ್ದರೆ ಪುತ್ರನನ್ನು ಪಡೆಯಬೇಕೆಂಬ ಕಾರಣದಿಂದ ಬಹುಪತ್ನಿತ್ವವು ರೂಢಿಯಲ್ಲಿ ಬಂದಿತು ಎಂದು ಹೇಳಲಾಗಿದೆ.

ಬ್ರಾಹ್ಮಣಗಳು ಮತ್ತು ಉಪನಿಷತ್ತುಗಳ ಕಾಲದಲ್ಲಿ ಸ್ತ್ರೀಯನ್ನು ಗೌರವದಿಂದ ಕಂಡಿರುವುದರ ಜೊತೆಗೆ ಅವಳನ್ನು ಕೀಳಾಗಿಯೂ ಸಹ ಕಾಣಲಾಗಿದೆ. ಸ್ವಾತಂತ್ರ್ಯ ಮತ್ತು ಗೌರವಗಳನ್ನುಳ್ಳ ಸ್ಥಿತಿಯಿಂದ, ಸಿಮೀತಗೊಂಡ ಸ್ವಾತಂತ್ರ್ಯ ಹಾಗೂ ಕ್ಷೀಣಿಸಿದ ಸ್ಥಾನಕ್ಕೆ ಸ್ತ್ರೀಯರ ಸ್ಥಾನಮಾನಗಳು ಬದಲಾದ ಸ್ಥಿತಿಯನ್ನು ಬ್ರಾಹ್ಮಣ ಮತ್ತು ಉಪನಿಷತ್ತುಗಳು ಪ್ರತಿಬಿಂಬಿಸುತ್ತವೆ. ಬ್ರಾಹ್ಮಣರು ಮತ್ತು ಉಪನಿಷತ್ತುಗಳ ಕಾಲದಲ್ಲಿ ನಿಯೋಗ ಪದ್ಧತಿಯು ಅಷ್ಟೊಂದು ಮಹತ್ವವನ್ನು ಪಡೆದಿರಲಿಲ್ಲ. ಆದರೆ ಮಹಾಕಾವ್ಯಗಳ ಕಾಲದಲ್ಲಿ ಮಹಾಭಾರತದಲ್ಲಿ ನಿಯೋಗ ಪದ್ಧತಿಯು ಆಚರಣೆಯಲ್ಲಿತ್ತು. ಧೃತರಾಷ್ಟ್ರ, ಪಾಂಡು, ವ್ಯಾಸ ಇವರೆಲ್ಲರು ನಿಯೋಗ ಪದ್ಧತಿಯಿಂದಲೇ ಜನಿಸಿದವರಾಗಿದ್ದರು. ಅಲ್ಲದೇ ಈ ಕಾಲದಲ್ಲಿ ವಿಧವೆಯರು ಬ್ರಹ್ಮಚರ್ಯವನ್ನು ಸ್ವೀಕರಿಸುವ ಅಧಿಕಾರವನ್ನು ಹೊಂದಿದ್ದರು. ಅಲ್ಲದೆ ಈ ಕಾಲದಲ್ಲಿ ಸ್ತ್ರೀಯನ್ನು ಬಹಳ ಹೀನಾಯವಾಗಿಯೂ ಕಾಣಲಾಗಿದೆ. ಸ್ತ್ರೀಯನ್ನು ಆಸ್ತಿಯೊಂದಿಗೆ ಸಮೀಕರಿಸಿ ಧರ್ಮರಾಜನು ಜೂಜಿನಲ್ಲಿ ಎಲ್ಲ ಆಸ್ತಿಯನ್ನು ಪಣಕ್ಕಿಟ್ಟಂತೆ ತನ್ನ ಹೆಂಡತಿಯಾದ ದ್ರೌಪದಿಯನ್ನು ಸಹ ಪಣಕ್ಕಿಟ್ಟನು. ಈ ರೀತಿಯಾಗಿ ಮಹಾಕಾವ್ಯಗಳ ಕಾಲದಲ್ಲಿಯೂ ಸಹ ಸ್ತ್ರೀಯ ಸ್ಥಾನ ಕ್ಷೀಣಿಸುತ್ತ ಬಂದಿತು.

ಪ್ರತಿಯೊಂದು ಹುಡುಗಿಯೂ ವಿವಾಹವಾಗುವುದು ಅನಿವಾರ್ಯವಾಯಿತು. ಪತಿಯ ಆಜ್ಞೆ ಪಾಲಿಸುವುದು ಮತ್ತು ಪಾತಿವ್ರತ್ಯ ಕಾಪಾಡಿಕೊಳ್ಳುವುದು ಅವರ ಪ್ರಮುಖ ಕರ್ತವ್ಯವೆಂದು ಭಾವಿಸಲಾಯಿತು. ಪತ್ನಿಯು ಪತಿಯನ್ನು ಪರದೈವವೆಂದು ತಿಳಿದು ಗೌರವಿಸಿ ಪೂಜಿಸಬೇಕೆಂದು ಹೇಳಿ ಪಾತಿವ್ರತ್ಯವನ್ನು ವೈಭವೀಕರಿಸ ಲಾಯಿತು. ಕಾಲಾನಂತರದಲ್ಲಿ ಈ ನಂಬಿಕೆಯೇ ಸತಿ ಆಚರಣೆಗೆ ಅವಕಾಶವಾಯಿತು. ಆದ ಕಾರಣ ಮಾದ್ರಿಯು ಪಾಂಡುರಾಜನ ಜೊತೆ ಸತಿ ಹೋದಳು. ಅಲ್ಲದೆ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳಿಗೆ ಪ್ರಾಶಸ್ತ್ಯ ಲಭಿಸಲು ಆರಂಭಿಸಿತು. ಅಲ್ಲದೆ ಸ್ತ್ರೀಯರನ್ನು ಮಾಸಿಕ ಋತುಸ್ರಾವದ ಅವಧಿಯಲ್ಲಿ ಮತ್ತು ಪ್ರಸವದ ಸಮಯದಲ್ಲಿ ಆಕೆಯನ್ನು 'ಅಶುದ್ಧ'ವೆಂದು ತಿಳಿದು ದೂರವಿಡಲು ಪ್ರಾರಂಭಿಸಿದರು. ವಿಧವಾ ವಿವಾಹವನ್ನು ನಿಷೇಧಿಸಲಾಯಿತು. ಬಹುಪತ್ನಿತ್ವವು ಜಾರಿಗೆ ಬಂದು ಸಮಾಜ ವಿಲಾಸಪ್ರಿಯ ವಾಯಿತು. ಸ್ತ್ರೀಯರನ್ನು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿ ಸಣ್ಣವಯಸ್ಸಿನಲ್ಲಿಯೇ ವಿವಾಹ ಮಾಡುವ ಪದ್ಧತಿ ಆರಂಭವಾಯಿತು. ಮದುವೆಯ ಸಮಯದಲ್ಲಿ ವರನ ಆಯ್ಕೆಯನ್ನು ಸಹ ನಿಷೇಧಿಸಲಾಯಿತು. ನೈತಿಕ ಮೌಲ್ಯಗಳಲ್ಲೂ ಬದಲಾವಣೆಯುಂಟಾಗಿ ಪತಿವ್ರತಾಧರ್ಮವೇ ಸರ್ವೋಚ್ಚ ಧರ್ಮ ಮತ್ತು ಸ್ವರ್ಗ ಪ್ರಾಪ್ತಿಗೆ ಸಾಧನವೆಂದಾಯಿತು.

ಸ್ಮೃತಿ ಹಾಗೂ ಪುರಾಣಗಳ ಕಾಲದಲ್ಲಿಯೂ ಸ್ತ್ರೀಯನ್ನು ಕೀಳಾಗಿ ಕಾಣಲಾಗಿದೆ. ಪುರಾಣಗಳಲ್ಲಿ ವಿಧವೆಯರು ಅಪವಿತ್ರರೆಂದು ಸ್ಪಷ್ಟವಾಗಿ ಮೊದಲಬಾರಿಗೆ ಪುರಾಣಗಳ ಕಾಲದಲ್ಲಿ ಕಾಣುತ್ತೇವೆ. ಪುರಾಣಗಳ ಕಾಲದಲ್ಲಿಯೂ ಸಹ ಪತಿ ಸತ್ತಮೇಲೆ ಸತಿ ಹೋಗಬೇಕು ಅಥವಾ ಬ್ರಹಚರ್ಯವನ್ನು ಸ್ವೀಕರಿಸಬೇಕಾಗಿತ್ತು. ಪುರಾಣಗಳ ಕಾಲದಲ್ಲಿ ಸತಿ ಪದ್ಧತಿಯೂ ಒಂದು ಆಚರಣೆಯಲ್ಲಿ ಜಾರಿಗೆ ಬಂದಿದೆ. ಪುರಾಣಗಳ ಕಾಲದಲ್ಲಿ ಸ್ತ್ರೀಯರನ್ನು ಅತಿ ಕೀಳಾಗಿ ಕಾಣಲಾಗಿದೆ. "ಸ್ಮೃತಿಗಳ ಕಾಲದಲ್ಲಿ ಪತಿಯ ಆಸ್ತಿಯಲ್ಲಿ ಪತ್ನಿಗೆ ಯಾವ ಅಧಿಕಾರವೂ ಇರಲಿಲ್ಲ. ಈ ಕಾಲದಲ್ಲಿಯೇ ಸ್ಮೃತಿಕಾರ ಮನುವು ಹೀಗೆ ಹೇಳಿದ್ದಾನೆ. ಸ್ತ್ರೀಯಾದವಳು ಬಾಲ್ಯದಲ್ಲಿ ತಂದೆಯ ಪೋಷಣೆಯಲ್ಲಿ, ಯೌವ್ವನದಲ್ಲಿ ಪತಿಯ ಪೋಷಣೆಯಲ್ಲಿ ಮತ್ತು ಮುಪ್ಪಿನಲ್ಲಿ ತನ್ನ ಮಕ್ಕಳ ಪೋಷಣೆಯಲ್ಲಿ ಇರಬೇಕೆಂದು ವಿಧಿಸಿದ್ದಾರೆ."[೨] ಸ್ತ್ರೀಯ ಬಗ್ಗೆ ಮಹರ್ಷಿ ಮನುವಿಗೆ ಗೌರವವಿದ್ದರು ಅವಳು ಸ್ವತಂತ್ರ್ಯಕ್ಕೆ ಅರ್ಹಳಲ್ಲ ಎಂದಿದ್ದಾನೆ. ಕೆಲವೊಂದು ಕಡೆ ಅವಳಿಗೆ ಮಹತ್ವವನ್ನು ನೀಡಿದ್ದರೂ ಸಹ ಸ್ತ್ರೀಯಾದವಳು ಪುರುಷರಿಗೆ ಅಧಿನರಾಗಿರುವಂತೆ ಮಾಡಿ ಅವರ ಪಾತ್ರದ ಮೇಲೆ ಹಾಗೂ ಅವರ ಹಕ್ಕುಗಳ ಮೇಲೆ ನಿಯಂತ್ರಣ ಹೇರಿದ್ದಾರೆ. ಹೀಗೆ ಈ ಕಾಲದಲ್ಲಿ ಸ್ತ್ರೀಯರ ಸ್ಥಿತಿ ಇನ್ನಷ್ಟು ಹೀನವಾಗಿ ಆಕೆ ಕೇವಲ ಮಾತೆಯ ರೂಪದಲ್ಲಿ ಮಾತ್ರ ಉಳಿದಳು. ಪತ್ನಿಯಾಗಿ ಅಥವಾ ಪ್ರೇಯಸಿಯಾಗಿ ಆಕೆಗೆ ಯಾವುದೇ ಸ್ಥಾನವಿರಲಿಲ್ಲ. ವಿವಾಹದ ವಯಸ್ಸನ್ನು ಇನ್ನಷ್ಟು ಕಡಿಮೆ ಮಾಡಲಾಯಿತು. ಮನು ಒಂದೆಡೆ ನಾರಿಯನ್ನು ಪೂಜಿಸಿದರೆ ಅಲ್ಲಿ ದೇವತೆಗಳು ವಾಸಿಸುತ್ತಾರೆ ಎಂದು ಹೇಳಿದ್ದಾನೆ. ಇನ್ನೊಂದೆಡೆ ಆಕೆ ಹುಟ್ಟಿದಾಗಿನಿಂದ ಸಾಯುವವರೆಗೂ ಪುರುಷನ ರಕ್ಷಣೆಯಲ್ಲಿಯೇ ಇರಬೇಕೆಂದು ಹೇಳಿದ್ದಾನೆ. ಮನುವಿನ ಕಾಲದಲ್ಲಿ ಪಾತಿವ್ರತ್ಯದ ವೈಭವೀಕರಣದಿಂದ ವಿಧವಾವಿವಾಹವು ನಿಧಾನವಾಗಿ ಅಗೌರವಕ್ಕೆ ಕಾರಣವಾಯಿತು. ವಿಧವೆಯಾದವಳು ತನ್ನ ಗಂಡನ ಸಾವಿನ ನಂತರ ಎಂದಿಗೂ ಪುನರ್ವಿವಾಹವನ್ನು ಯೋಚಿಸಬಾರದು ಎಂದು ವಿಧಿಸಿದನು. ಮತ್ತೊಬ್ಬ "ಸ್ಮೃತಿಕಾರನಾದ ನಾರದನ ಪ್ರಕಾರ ಒಬ್ಬ ಹುಡುಗಿಯ ಮದುವೆ ಒಂದು ಬಾರಿ ಮಾತ್ರ ಸಾಧ್ಯ ಅವರು ಬ್ರಹ್ಮಚರ್ಯವನ್ನು ಅನುಸರಿಸಬೇಕೆಂದು ಕಟುವಾಗಿ ಹೇಳಿದ್ದಾರೆ."[೩] ಕೆಲವೊಂದು ಕಡೆ ಸ್ಮೃತಿಕಾರರು ಮಹಿಳೆಯ ಮೇಲೆ ಅದರಲ್ಲೂ ವಿಧವೆಯರ ಮೇಲೆ ಔದಾರ್ಯವನ್ನು ತೋರಿಸಿ ವಿಧವಾ ಪುನರ್ವಿವಾಹಕ್ಕೆ ಹಕ್ಕನ್ನು ನೀಡಲಾಗಿದೆ ಎಂದು ಕೌಟಿಲ್ಯ ಮತ್ತು ನಾರದ ಮುಂತಾದವರು ತಮ್ಮ ಸ್ಮೃತಿಗಳಲ್ಲಿ ತಿಳಿಸಿದ್ದಾರೆ. "ಹೆಂಡತಿಯಾದವಳು ತನ್ನ ಪತಿಯ ಗೃಹವನ್ನು ತಲುಪುವ ಮುಂಚೆಯೇ ವಿಧವೆಯಾದಲ್ಲಿ ಮತ್ತು ಗಂಡ-ಹೆಂಡಿರ ಪ್ರಥಮ ಮಿಲನಕ್ಕಿಂತ ಮುಂಚೆಯೇ ವೈಧವ್ಯವು ಪ್ರಾಪ್ತವಾದಲ್ಲಿ ಆಕೆಯು ಪುನರ್ವಿವಾಹ ಮಾಡಿಕೊಳ್ಳುವ ಅವಕಾಶ ನೀಡಬೇಕೆಂದು ಕೌಟಿಲ್ಯ, ಪರಶರ ತಿಳಿಸಿದ್ದಾನೆ. ಅಲ್ಲದೆ ಸ್ತ್ರೀಯಿಂದಲೇ ಧರ್ಮೋದ್ಧಾರ ಮತ್ತು ಸಾಮಾಜಿಕ ಪ್ರಗತಿ ಸಾಧ್ಯ ಎಂಬುದನ್ನು ಒತ್ತಿ

ಹೇಳಿದ್ದಾನೆ.''[೪] ಆದರೆ ವಿಧವೆಯು ಇಂದು ಪುನರ್ವಿವಾಹವಾಗುವ ಅವಕಾಶವನ್ನು ಹೊಂದಿದ್ದರು ಸಹ ಸಮಾಜದ ಭಯದಿಂದ ಮತ್ತು ಏಕಪತಿವ್ರತಾ, ಪಾತಿವ್ರತ್ಯದ ಕಲ್ಪನೆಯಿಂದ ಅವಳು ವಿವಾಹವಾಗುತ್ತಿಲ್ಲ. ಪತಿಯು ತಿರಿದಾಗ ಆತನ ಆಸ್ತಿಯಲ್ಲಿ ಹಕ್ಕನ್ನು ಪಡೆಯಬಹುದಾಗಿದೆ. ಅಲ್ಲದೆ ವೇದಗಳ ಕಾಲದಲ್ಲಿಯ ಹಾಗೆ ತಂದೆಯ ಆಸ್ತಿಯಲ್ಲಿಯೂ ಸಮನಾದ ಪಾಲನ್ನು ಹೊಂದಿದ್ದಾಳೆ. ಮಹಿಳೆಯು ಪುರುಷನಂತೆಯೇ ವಿಚ್ಛೇದನೆಯನ್ನು ಪಡೆಯುವ ಹಕ್ಕನ್ನು ಹೊಂದಿದ್ದಾಳೆ. ಆದರೆ ಸಮಾಜ ತನ್ನನ್ನೆ ದುಷಿಸುವುದು ಎನ್ನುವ ದೃಷ್ಟಿಯಿಂದ ಅವಳು ಪತಿಯೇ ಪರದೈವವೆನ್ನುವ ಕಲ್ಪನೆಯು ಮನದಲ್ಲಿ ಮೂಡಿರುವುದರಿಂದ ಆತನು ಎಷ್ಟೇ ಕಷ್ಟಕೊಟ್ಟರು ಸಹ ವಿಚ್ಛೇದನೆಯನ್ನು ಪಡೆಯುವುದಿಲ್ಲ. ಮಹಿಳೆಯು ಎಲ್ಲಾ ಅಧಿಕಾರವನ್ನು ಪಡೆದಿದ್ದರು ಸಹ ಎಲ್ಲ ಸಮಾಜದ ನಿಂದನೆಗೆ ಗುರಿಯಾಗುವೆನು ಎನ್ನುವ ಭಯದಿಂದ ಅವಳು ಎಲ್ಲಾ ಹಕ್ಕುಗಳಿಂದ ವಂಚಿತಳಾಗಿದ್ದಾಳೆ.

## ಬೌದ್ಧಧರ್ಮ

ಬುದ್ಧನ ಕಾಲಕ್ಕಿಂತ ಮುಂಚಿತವಾಗಿಯೇ ಸ್ತ್ರೀಯರ ಅಂತಸ್ತು ಕ್ಷಿಣಿಸುತ್ತ ಅವರು ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದರು. ಸ್ತ್ರೀಯರನ್ನು ತುಚ್ಛವಾಗಿ ಕಾಣುತ್ತಿರುವುದರಿಂದ ಅವರ ವಿದ್ಯಾಭ್ಯಾಸದಲ್ಲಿಯೂ ಸಹ ಕುಂಠಿತವಾಯಿತು. ಪುರುಷರಂತೆ ಸ್ತ್ರೀಯರು ಸನ್ಯಾಸವನ್ನು ಸ್ವೀಕರಿಸಲು ಪ್ರಯತ್ನಿಸಿದರು. ಸಮಾಜ ಅದನ್ನು ಬೆಂಬಲಿಸಲಿಲ್ಲ ಕಾರಣ ಅವರಿಗೆ ಕ್ರಮಬದ್ಧವಾದ ಸನ್ಯಾಸ ಜೀವನ ನಡೆಸಲಾಗದೆಂದು ಅವರನ್ನು ನಿರುತ್ಸಾಹ ಗೊಳಿಸಿದರು. ಸ್ವತಹ ಗೌತಮ ಬುದ್ಧನು ಸಹ ಸ್ತ್ರೀಯರಿಗೆ ಪ್ರಾಮುಖ್ಯತೆ ನೀಡಲಿಲ್ಲ. ಲೈಂಗಿಕ ಜೀವನಕ್ಕಿಂತ ಬ್ರಹ್ಮಚರ್ಯವೇ ಮೇಲೆಂದು ವಿವಾಹವನ್ನು ಅತ್ಯವಶ್ಯಕವಾದ ಒಂದು ಸಂಸ್ಕಾರ, ವಿಧಿ ಎಂದು ಪರಿಗಣಿಸಲೇ ಇಲ್ಲ. ಬುದ್ಧನು ಸತಿಪತಿಗಳಲ್ಲಿ ಯಾರು ಬೇಕಾದರು ದಾಂಪತ್ಯ ಬಂಧನದಿಂದ ಹೊರಬಂದು ಆಧ್ಯಾತ್ಮಿಕ ಜೀವನವನ್ನು ನಡೆಸಬಹುದೆಂದು ಬೋಧಿಸಿದನು. ಪುರುಷರಿಗೆ ಸಮಾನವಾದ ಅಂತಸ್ತನ್ನು ಸ್ತ್ರೀಯರಿಗೆ ಬುದ್ಧ ನೀಡದೇ ಹೋದರೂ ಆತನ ವಿಚಾರಗಳ ಪ್ರಭಾವದಿಂದ ಸ್ತ್ರೀಯರ ಸ್ಥಾನಮಾನದಲ್ಲಿ ಸಾಕಷ್ಟು ಸುಧಾರಣೆಗಳಾದವು. ಅಶೋಕ ಮತ್ತು ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಸ್ತ್ರೀಯರ ಸ್ಥಿತಿ ಉತ್ತಮವಾಗಿತ್ತು. ಇವರು ಸ್ತ್ರೀಯರಿಗೆ ಸಾಕಷ್ಟು ಪ್ರಾಮುಖ್ಯತೆ ನೀಡಿದರು. ವಿಧವೆಯರಿಗೂ ಒಳ್ಳೆಯ ರೀತಿಯಲ್ಲಿ ಸ್ಥಾನಮಾನಗಳನ್ನು ನೀಡಲಾಗಿತ್ತು. ಬೌದ್ಧಮತದಲ್ಲಿ ಸ್ತ್ರೀಯರನ್ನು ಪುರಷರಿಗಿಂತ ಕೀಳಾಗಿ ಕಂಡರೂ ಸ್ತ್ರೀಯರ ಒಟ್ಟು ಸ್ಥಿತಿ-ಗತಿ ಸಾಂಪ್ರದಾಯಿಕ ಹಿಂದೂ ಮಹಿಳೆಯರಿಗಿಂತಲೂ ಉತ್ತಮ ಮಟ್ಟದ್ದಾಗಿತ್ತು. "ವಿವಾಹವು ಅನಿವಾರ್ಯವಾಗಿರಲಿಲ್ಲ. ಹಾಗೆಯೇ ವೈಧವ್ಯವು ಅವಹೇಳನಾಸ್ಪದವಾದು ದಾಗಿರಲಿಲ್ಲ. ವಿಧವೆಯರು ಸತಿ ಹೋಗುವುದಾಗಲಿ, ಅವಳನ್ನು ಹೀನಾಯವಾಗಿ ಕಾಣುವುದಾಗಲಿ ಇರಲಿಲ್ಲ. ತನ್ನ ಪತಿಯ ಜೀವಿತ ಕಾಲದಲ್ಲಿ ಸಮಾಜದಲ್ಲಿ ಯಾವ ರೀತಿಯ ಸಾಮಾಜಿಕ ಸ್ಥಾನಮಾನವನ್ನು

ಅನುಭವಿಸುತ್ತಿದ್ದಳೋ, ಪತಿಯ ಮರಣದ ನಂತರವೂ ಅದೇ ರೀತಿಯ ಸ್ಥಾನಮಾನಗಳನ್ನು ಹೊಂದಿದ್ದಳು.''[೫] ಬುದ್ಧನ ಕಾಲದಲ್ಲಿ ಕೇಶಮುಂಡನ, ಆಭರಣಗಳ ತ್ಯಾಗ ಮಾಡುವುದು ರೂಢಿಯಲ್ಲಿರಲಿಲ್ಲ. ಅಲ್ಲದೆ ಬೌದ್ಧ ವಿಧವೆಯರು ಉಪವಾಸ, ವ್ರತ ಮಾಡುವುದಾಗಲಿ, ಚಾಪೆಯ ಮೇಲೆ ಮಲಗುವುದಾಗಲಿ ರೂಢಿಯಲ್ಲಿರಲಿಲ್ಲ. ಶುಭ ಸಮಾರಂಭಗಳಲ್ಲಿ ವಿಧವೆಯರೂ ಇತರ ಸ್ತ್ರೀಯರಂತೆ ಭಾಗವಹಿಸುತ್ತಿದ್ದರು. ಅವಳ ಭಾಗವಹಿಸುವಿಕೆ ಅಪವಿತ್ರವಾಗಿರಲಿಲ್ಲ. ಅವಳ ಗಂಡ ಸತ್ತಾಗ ಅವಳ ಪಾಲನೆ ಪೋಷಣೆಯನ್ನು ಅವಳ ತಂದೆ, ತಾಯಿ, ಅಣ್ಣ, ತಮ್ಮಂದಿರು ಇಲ್ಲವೇ ಸಮೀಪದ ಒಂದು ಬಳಗದವರು ನೋಡಿಕೊಳ್ಳುತ್ತಿದ್ದರು. ಒಂದು ವೇಳೆ ಅವಳಿಗೆ ಸಂಬಂಧಿಕರಾರು ಇರದಿದ್ದರೆ ಅವಳು ಧರ್ಮಕ್ಕೆ ಶರಣಾದರೆ, ಧರ್ಮಸಂಘದ ಬಿಕ್ಷುಣಿಯರು ಅವಳ ಪಾಲನೆ ಪೋಷಣೆಯ ಜವಾಬ್ದಾರಿ ಹೊರುತ್ತಿದ್ದರು. ಬೌದ್ಧ ಧರ್ಮದಲ್ಲಿ ಪತಿ ಸಂಘವನ್ನು ಸೇರಿದರೆ ಹೆಂಡತಿಯೂ ಕೂಡ ಧರ್ಮದ ಪ್ರವೇಶ ಮಾಡುವ ಸ್ವಾತಂತ್ರ್ಯ ಹೊಂದಿದ್ದಳು.

ಪತಿ ಮರಣ ಹೊಂದಿದ ಹರೆಯದ ವಿಧವೆ ಮರುಮದುವೆಯಾಗುವ ಸ್ವಾತಂತ್ರ್ಯವನ್ನು ಹೊಂದಿದ್ದಳು. ವಿಧವೆಯರೂ ಕೂಡ ಸನ್ಯಾಸಿ ಮಠಕ್ಕೆ ಸೇರಬಹುದಿತ್ತು. ಅವರು ಆಧ್ಯಾತ್ಮಿಕ ಜೀವನವನ್ನು ಕಳಂಕವಿಲ್ಲದೆ ನಡೆಸಬಹುದಿತ್ತು. ನಿರ್ವಾಣವನ್ನು ಪಡೆಯಲು ಸ್ತ್ರೀಯರಿಗೆ ಪುರುಷರಷ್ಟೇ ಅವಕಾಶಗಳಿದ್ದವು. ಅವರು ಪಾತಿವ್ರತ್ಯಕ್ಕೆ ಅಷ್ಟು ಮಹತ್ವಕೊಟ್ಟಿರಲಿಲ್ಲ. ಬೌದ್ಧ ಭಿಕ್ಷುಣಿಯರಾಗುವುದರಿಂದ ಅವರು ಬೌದ್ಧಸಂಘವನ್ನು ಸೇರುವುದರಿಂದ ಅವರಿಗೆ ಜೀವನ ಮುಕ್ತಿ ಹಾಗೂ ಸಮಾಜದಲ್ಲಿ ಇನ್ನು ಹೆಚ್ಚಿನ ಸ್ಥಾನ ಸಿಗುತ್ತಿತ್ತು. ಅನೇಕ ವಿಧವೆಯರು ಪುನರ್ವಿವಾಹವಾಗದೆಯೇ ಸಂಘದಲ್ಲಿಯೂ ಕೂಡ ಪ್ರವೇಶ ಮಾಡದೆಯೇ ತಮ್ಮ ಮಕ್ಕಳ ಪಾಲನೆ ಪೋಷಣೆ ಮಾಡುತ್ತ ಸುಖದಿಂದ ಜೀವನವನ್ನು ನಡೆಸಬಹುದಿತ್ತು. ಬೌದ್ಧನ ಕಾಲದಲ್ಲಿ ವಿಧವೆಯು ತನ್ನ ಗಂಡನ ಆಸ್ತಿಯನ್ನು ಪಡೆಯಬಹುದಾಗಿತ್ತು ಅಂದರೆ ಆಸ್ತಿಯ ಹಕ್ಕು ಹೊಂದಿದ್ದಳು. ಬಡ ವಿಧವೆಯರಷ್ಟೇ ಅಲ್ಲದೆ ಶ್ರೀಮಂತರು, ರಾಣಿಯರು, ಮಹಾರಾಣಿಯರು ಮುಂತಾದವರು ಕೂಡ ತಮ್ಮ ಗಂಡಂದಿರು ಸತ್ತ ನಂತರ ಬೌದ್ಧ ಭಿಕ್ಷುಣಿಯರ ಸಂಘದಲ್ಲಿ ಪ್ರವೇಶ ಮಾಡುತ್ತಿದ್ದರು. ಒಂದು ವೇಳೆ ಸಂಘ ಸೇರದೆ ತಮ್ಮ ಬಂಧುಗಳ ಜೊತೆ ಉಳಿದರೂ ಅವರಿಗೆ ಯಾವುದೇ ರೀತಿಯಾದ ಕಿರುಕುಳ ಅಲ್ಲಿ ಇರಲಿಲ್ಲ. ಅವರು ಸುರಕ್ಷಿತವಾದ ಜೀವನ ನಡೆಸುತ್ತಿದ್ದರು.

ಆದರೆ ಧರ್ಮಶಾಸ್ತ್ರಗಳ ಕಾಲಾವಧಿಯಲ್ಲಿ ಸ್ತ್ರೀಯರ ನಡತೆಯ ಮೇಲೆ ನಿಷೇಧಗಳು ಹೇರಲ್ಪಟ್ಟವು. ಅವರ ಸ್ವಾತಂತ್ರ್ಯದ ಮೇಲೆ ಇತಿಮಿತಿಗಳನ್ನು ಹೇರಿದ್ದರಿಂದ ಅವರ ಸಾಮಾಜಿಕ ಅಂತಸ್ತು ಬಹಳಷ್ಟು ಕ್ಷೀಣಿಸಿತು. ''ಗುಪ್ತರ ಯುಗದ ಕಾಲದಲ್ಲಿ(ಕ್ರಿ.ಶ.೫ ರಿಂದ ೬ನೇ ಶತಮಾನದಲ್ಲಿ) ಬೌದ್ಧಧರ್ಮವು ಕ್ಷೀಣಿಸುತ್ತ ಬಂದು, ಹಿಂದೂ ಧರ್ಮವು ಉಚ್ಛ್ರಾಯ ಸ್ಥಿತಿಯನ್ನು ಮುಟ್ಟಿತು.''[೬] ಈ ಸಮಯದಲ್ಲಿಯೇ

ಧರ್ಮಶಾಸ್ತ್ರಗಳು ರೂಪಗೊಂಡು ಸ್ತ್ರೀಯರ ಬಗ್ಗೆ ಕಠೋರವಾದ ನಿಯಮಗಳನ್ನು ರಚಿಸಿದವು. ಈ ರೀತಿ ಧರ್ಮಶಾಸ್ತ್ರಗಳು ಸ್ತ್ರೀಯರ ಬಗೆಗೆ ಬಹಳ ಬಿಗುವಿನ ನಿಲುವನ್ನು ತಳೆದಿರುವುದರಿಂದ ಕೆಲವು ಸಮಸ್ಯೆಗಳು ಹುಟ್ಟಿಕೊಂಡವು ಅವುಗಳೆಂದರೆ

೧. "ಸ್ತ್ರೀಯರಿಗೆ ಅವರು ರಜಸ್ವತಿಯರಾಗುವುದಕ್ಕಿಂತ ಮುಂಚೆಯೇ ವಿವಾಹ ಮಾಡಬೇಕೆಂದು ಮಾರೀಚ, ಯಜ್ಞವಲ್ಕ್ಯ, ಪರಾಶರ ಮುಂತಾದವರು 'ಬಾಲ್ಯವಿವಾಹ'ವಾಗುವಂತೆ ಹೇಳಿದ್ದಾರೆ.

೨. ವಿವಾಹವು ಕಡ್ಡಾಯವಾಗಿ ಮತ್ತು ಬಾಲ್ಯವಿವಾಹವು ಅನಿವಾರ್ಯವಾಗಿರುವುದರಿಂದ ಹಣವನ್ನು ಕೊಟ್ಟು ಆಸೆ ತೋರಿಸಿ ವಿವಾಹ ಮಾಡಬೇಕೆಂಬ ಒತ್ತಡವುಂಟಾಗಿ ವರದಕ್ಷಿಣಾ ಪದ್ಧತಿಯು ಪಿಡುಗಾಗಿ ಆರಂಭವಾಯಿತು.

೩. ಪಾತಿವ್ರತ್ಯದ ವೈಭವೀಕರಣದಿಂದಾಗಿ, 'ಪತಿಯೇ ಪರದೈವ' ಎಂಬ ನಂಬಿಕೆ ಮೂಡಿ ಪತಿಯೂ ತಮಗಿಂತ ಮುಂಚೆ ಸತ್ತರೆ ಅವರೊಂದಿಗೆ ತಾವು ಸಾಯುವುದರಿಂದಲೇ ತಮಗೆ ಶ್ರೇಯಸ್ಸು ಲಭಿಸುವುದೆಂದು ಸ್ತ್ರೀಯರ ಮನದಲ್ಲಿ ಭಾವನೆಗಳನ್ನು ಮೂಡುವಂತೆ ಪುರೋಹಿತ ವರ್ಗವು ಮಾಡಿರುವುದರಿಂದ ಸತಿಪದ್ಧತಿಯೂ ಆಚರಣೆಗೆ ಬಂದಿತು. ಅಲ್ಲದೆ ಸತಿ ಹೋಗದೆ ಉಳಿದ ವಿಧವೆಯರು ಬಾಲವಿಧವೆಯರನ್ನು ಒಳಗೊಂಡಂತೆ ಎಲ್ಲರು ಅವಹೇಳನಕ್ಕೆ ಕ್ರೂರತೆಗೆ ಒಳಗಾಗಿ ಕ್ರೂರವಾಗಿ ವೈಧವ್ಯ ಜೀವನವನ್ನು ನಡೆಸಬೇಕಾಯಿತು."[೭]

ಈ ರೀತಿಯಾಗಿ ವಿವಾಹವು ಕಡ್ಡಾಯವಾಗಿರುವುದರಿಂದ ಅವರು ಸ್ವತಂತ್ರತೆಗೆ ಅರ್ಹರಲ್ಲವಾದುದ್ದರಿಂದ ಕುಟುಂಬವೇ ಸ್ತ್ರೀಯರಿಗೆ ಒಳ್ಳೆಯ ನೆಲೆ, ಕೌಟುಂಬಿಕ ಹೊಣೆಗಾರಿಕೆ, ತಾಯ್ತನದ ಜವಾಬ್ದಾರಿಗಳಿಂದ ಕೂಡಿದ ಸ್ತ್ರೀಯರಿಗೆ ಗೃಹಸ್ಥಾಶ್ರಮವೇ ಯೋಗ್ಯ ಎಂದು ಮತ್ತು ಉಪನಯನದಂತಹ ಮುಖ್ಯ ಸಂಸ್ಕಾರಗಳನ್ನು ಸ್ತ್ರೀಯರಿಗೆ ನಿರಾಕರಿಸಿ, ವಿವಾಹದಿಂದಲೇ ಅವರು ಮುಕ್ತಿಯನ್ನು ಪಡೆಯುತ್ತಾರೆ, ಅಲ್ಲದೆ ವಿವಾಹವು ಸ್ತ್ರೀಪುರುಷರಿಬ್ಬರಿಗೂ ಒಂದು 'ಪವಿತ್ರವಾದ ಸಂಸ್ಕಾರ' ಎಂದು ತಿಳಿದಿದ್ದರು ಸಹ ಪುರುಷನಿಗೆ ಎರಡನೇ ಪತ್ನಿಯನ್ನು ಹೊಂದುವ ಹಕ್ಕನ್ನು ನೀಡಿ, ಪತ್ನಿ ಕಳೆದುಕೊಂಡಾಗ ಪುನಃ ವಿವಾಹವಾಗುವ ಅವಕಾಶ ನೀಡಿದ್ದಾರೆ. ಗಂಡಸತ್ತರೆ ಅವಳು ಸತಿ ಹೋಗಬೇಕಾಗಿತ್ತು. ಪತಿಯ ಮರಣದ ನಂತರ ಅವನ ಸತಿಯನ್ನು(ಹೆಂಡತಿ) ಅವನ ಚಿತೆಯಲ್ಲಿ ಅವನ ಪಕ್ಕದಲ್ಲಿ ಮಲಗಿಸಿ "ಹೇ ಮೃತ ಮನುಜನೆ ಪತಿಯ ಜೊತೆ ಸ್ವರ್ಗಕ್ಕೆ ಹೋಗುವ ಸಲುವಾಗಿ ಪರಂಪರೆಯ ಪ್ರಕಾರ ಈ ಸ್ತ್ರೀಯು ನಿನ್ನ ದೇಹದ ಪಕ್ಕದಲ್ಲಿ ಮಲಗಿರುವಳು ಅವಳಿಗೆ ಧನ ಮತ್ತು ಸಂತಾನ ಪ್ರಾಪ್ತಿ ಮಾಡು ಎಂಬ ಮಂತ್ರವನ್ನು ಹೇಳುತ್ತಿದ್ದರು."[೮]

ಆಸ್ತಿಪಾಸ್ತಿಗಳು ಮತ್ತು ಸಂಪತ್ತಿನ ವಾರಸುತನದ ಹಕ್ಕಿನ ನಿಯಮಗಳನ್ನು ಧರ್ಮಶಾಸ್ತ್ರದಲ್ಲಿ ತೀರ ಕಟುತರವಾಗಿ ಮಾಡಿದ್ದಾರೆ. ಪತ್ನಿಯಾದವಳು ಸಂಪತ್ತನ್ನು ಉಪಯೋಗಿಸಬಹುದು ಆದರೆ ಸಂಪತ್ತಿನ

ಲೇವಾದೇವಿಯ ಅಧಿಕಾರವನ್ನು ನೀಡಿಲ್ಲ. ''ಮನುಸ್ಮೃತಿಯಲ್ಲಿ ಸಂತಾನವಿಲ್ಲದೇ ಮೃತನಾದವನ ಸಂಪತ್ತಿನ ಹಂಚಿಕೆಯು ಮೃತನ ಆಸ್ತಿಪಾಸ್ತಿ ಸಂಪತ್ತು ಮೃತನ ತಂದೆಗೆ ಸೇರಬೇಕು. ಪಿತನು ಜೀವಿತನಿರದಿದ್ದರೆ ಮೃತನ ಸ್ವಂತ ಬಂಧುವಿಗೆ ಸೇರಬೇಕು. ಅವನು ಇರದಿದ್ದರೆ ಗುರುವಿಗೆ ಸೇರಬೇಕು. ಒಂದು ವೇಳೆ ಗುರುವು ಇಲ್ಲದಿದ್ದರೆ, ಗುರುವಿನ ಶಿಷ್ಯನಿಗೆ ಸೇರಬೇಕು. ಆದರೆ ಮೃತನ ಪತ್ನಿಗೆ ಆಸ್ತಿ ಸೇರಬಾರದು ಎಂದು ಹೇಳಿದ್ದಾನೆ. ಆದರೆ ಮಿತಾಕ್ಷರಿ ಗ್ರಂಥದಲ್ಲಿ ವಿಧವೆಯಾದವಳು ಸಚ್ಚರಿತಳಾಗಿ ಜೀವಿಸಿದ್ದರೆ, ಅವಳಿಗೆ ಆಸ್ತಿಪಾಸ್ತಿಗಳ ಅಧಿಕಾರವನ್ನು ಕೊಡಲು ಅಡ್ಡಿಯಿಲ್ಲ ಎಂದಿದೆ.''[೯] ವಾರಸಾಹಕ್ಕನ್ನು ಬೇಡುವ ವಿಧವಾ ಸ್ತ್ರೀಗೆ ಸತಿಯ ಹೆಸರಿನಲ್ಲಿ ಮೃತ ಪತಿಯೊಡನೆ ಚಿತೆಗೆರಸಲಾಯಿತು. ಇದರಿಂದ ಸಹ ಸತಿಪದ್ಧತಿ ಪ್ರಾರಂಭವಾಯಿತು. ಕಾರಣ ವಿಧವೆಯಿಂದ ಆಸ್ತಿಹಕ್ಕನ್ನು ಕಳೆದುಕೊಳ್ಳಲು ಬ್ರಾಹ್ಮಣ ಪುರೋಹಿತರು ಸತಿಪದ್ಧತಿಯನ್ನು ನಮ್ಮ ವೇದಗಳು ಪುರಸ್ಕರಿಸಿವೆ ಎಂದು ಹೇಳಲು ಪ್ರಾರಂಭಿಸಿದರು. ಸ್ಮೃತಿಕಾರರು ಸಹ ಸತಿಪದ್ಧತಿಯನ್ನು ದುಷ್ಟಪದ್ಧತಿಯೆಂದು ಹೇಳಲಿಲ್ಲ. ಅಥರ್ವಣವೇದದ ಕಾಲದಲ್ಲಿ ಸ್ವಲ್ಪ ಮಟ್ಟಿಗೆ ಸತಿ ಪದ್ಧತಿಯೂ ರೂಢಿಯಲ್ಲಿತ್ತು. ಆದರೆ ಅದೇ ಬುದ್ಧನ ಕಾಲದಲ್ಲಿ ಈ ಪದ್ಧತಿಯೂ ರೂಢಿಯಲ್ಲಿರಲಿಲ್ಲ. ಬೃಹದ ರಥ ಬೌದ್ಧರಾಜನ ಮರಣದನಂತರ ಪುಷ್ಯಮಿತ್ರ ಶೃಂಗ ಹೆಸರಿನ ಬ್ರಾಹ್ಮಣ ರಾಜನ ಆಳ್ವಿಕೆ ಪ್ರಾರಂಭವಾಯಿತು. ಈ ಕಾಲದಲ್ಲಿಯೇ ಬ್ರಾಹ್ಮಣ ಧರ್ಮವು ಬೆಳವಣಿಗೆ ಹೊಂದಿ ತನ್ನ ಪ್ರಭಾವ ಬಿರಲು ಪ್ರಾರಂಭಿಸಿತು. ''ಅಲ್ತೇಕರರ ಪ್ರಕಾರ ಕ್ರಿ.ಶ.೪ನೇ ಶತಮಾನದಲ್ಲಿ ಸತಿಪದ್ಧತಿಯೂ ರೂಢಿಯಲ್ಲಿತ್ತು. ಆದರೆ ಅದು ಉಚ್ಚವರ್ಗದವರಲ್ಲಿ ಮಾತ್ರ ಕಂಡುಬರುತ್ತಿತ್ತು. ಬಹುಜನ ಸಮಾಜದಲ್ಲಿ ಇದು ಎಂದಿಗೂ ಸ್ವೀಕೃತವಾಗಿರಲಿಲ್ಲ. ಕಾರಣ ಅವರಲ್ಲಿ ಬೌದ್ಧಧರ್ಮದ ಪ್ರಭಾವವಿತ್ತು. ಕ್ರಿ.ಶ.೭ನೇ ಶತಮಾನದಲ್ಲಿ ಅಂಗೀರಸ ಸ್ಮೃತಿಯು ಸತಿಪದ್ಧತಿಯನ್ನು ಬೆಂಬಲಿಸಿತು ಅಥವಾ ದೃಢಪಡಿಸಿತು. ಬುದ್ಧ ಹರೀತ ಎಂಬ ಹೆಸರಿನ ಸ್ಮೃತಿಕಾರನ ಪ್ರಕಾರ ಸತಿ ಹೋದ ಪತ್ನಿಯು ತನ್ನ ಪತಿಯೊಡನೆ ಸ್ವರ್ಗದಲ್ಲಿ ಮೂರುವರೆ ಕೋಟಿ ವರ್ಷಗಳವರೆಗೆ ಸಂಸಾರ ಮಾಡುವಳು ಎಂದು ಹೇಳಿದ್ದಾನೆ.''[೧೦] ಒಂದು ವೇಳೆ ಪತ್ನಿಯು ತನ್ನ ಪತಿಯೊಡನೆ ತನ್ನ ಮನಸ್ಸಿನ ವಿರುದ್ಧವಾಗಿ ಸತಿ ಹೋದರೂ ಸಹ ಅವಳಿಗೆ ಪತಿಯೊಡನೆ ಸ್ವರ್ಗದಲ್ಲಿ ಸ್ಥಾನ ಸಿಗುವುದು. ಪತಿಯ ಜೊತೆ ಸ್ವರ್ಗದಲ್ಲಿ ಸುಖವನ್ನು ಅನುಭವಿಸುವುದಕ್ಕಾಗಿ ಅನೇಕ ಸ್ತ್ರೀಯರು ತಮ್ಮ ಪತಿಯ ಮರಣಕ್ಕಿಂತ ಮುಂಚಿತವಾಗಿಯೇ ಸತಿ ಹೋಗಲು ಪ್ರಾರಂಭಿಸಿದರು.

ಹಿಂದೂ ಧರ್ಮಶಾಸ್ತ್ರದಲ್ಲಿ ಪುರುಷರಿಗೆ ವಿವಾಹದ ವಿಷಯದಲ್ಲಿ ಬಂಧನವಿರಲಿಲ್ಲ. ಅವರು ಎಷ್ಟು ಬೇಕಾದರೂ ವಿವಾಹವಾಗುವ ಅಧಿಕಾರವನ್ನು ಪಡೆದಿದ್ದರು. ಈ ಕಾರಣದಿಂದಾಗಿಯೇ ಅನೇಕ ಸ್ತ್ರೀಯರನ್ನು ಮದುವೆಯಾಗುವುದರಿಂದ ಪತಿಯು ಮರಣಹೊಂದಿದ ಮೇಲೆ ಅವನ ಪತ್ನಿಯರೆಲ್ಲರು ವಿಧವೆಯರಾಗುತ್ತಿದ್ದರು. ''ಗಾಂಗೇಯದೇವ ಎಂಬ ಛೇದಿ ದೇಶದ ರಾಜ ಮರಣಹೊಂದಿದಾಗ ಆತನ

ನೂರು ರಾಣಿಯರು ವಿಧವೆಯರಾದರು. ಮಾರವಾಡದ ರಾಜ ಅಜೀತ ಸಿಂಗನು ೧೭೨೪ರಲ್ಲಿ ತೀರಿಕೊಂಡಾಗ ಅವನ ಜೊತೆ ಅರವತ್ತನಾಲ್ಕು ರಾಣಿಯರು ಅಗ್ನಿ ಪ್ರವೇಶ ಮಾಡಿದರು. ಪಾಂಡಿಯ ರಾಜನು ಮರಣಹೊಂದಿದಾಗ ಎಂಬತ್ತನಾಲ್ಕು ರಾಣಿಯರು ಸತಿ ಹೋದರು. ಪಂಜಾಬ್ ದ ಸಾಚೇತ ಸಿಂಗ ರಾಜನ ಮರಣದ ನಂತರ ಅವನ ಮೂರನೂರಾ ಹತ್ತು ಸ್ತ್ರೀಯರು ಮರಣಹೊಂದಿದರು."[೧೧] ಈ ರೀತಿ ಸ್ಮೃತಿಕಾರರು ಒಂದು ಕಡೆ ಬಾಲ್ಯ ವಿವಾಹ ಪದ್ಧತಿಯನ್ನು ಜಾರಿಗೆಗೊಳಿಸಿ ಸ್ತ್ರೀಯರ ವಿವಾಹ ಸ್ವಾತಂತ್ರ್ಯಕ್ಕೆ ಧಕ್ಕೆ ಉಂಟು ಮಾಡುವುದರ ಜೊತೆಗೆ ವಿಧವಾ ಪುನರ್ವಿವಾಹವನ್ನು ನಿರ್ಬಂಧಿಸಿದರು. ವಿಷ್ಣು ಪುರಾಣವು ವಿಧವೆಯರು ಮರಣ ಹೊಂದುವ ತನಕ ಬ್ರಹ್ಮಚರ್ಯ ಪಾಲಿಸಬೇಕೆಂದು ಹೇಳಿದೆ. ಮನುವಿನ ಪ್ರಕಾರ ವಿಧವೆಯಾದವಳು ಕನಸಿನಲ್ಲಿಯೂ ಸಹ ಮದುವೆಯ ಕಲ್ಪನೆ ಮಾಡುವುದು ಪಾಪ ಎಂದಿದ್ದಾನೆ. ಆದಿತ್ಯ ಪುರಾಣದಲ್ಲಿ ವಿಧವಾ ವಿವಾಹವನ್ನು ನಿಷೇಧಿಸಲಾಗಿದೆ. ಅಲ್ಲದೆ ವಿಧವೆಯರ ಮಕ್ಕಳನ್ನು ಶ್ರಾದ್ಧಕಾರ್ಯಕ್ಕೆ ಆಮಂತ್ರಿಸುತ್ತಿರಲಿಲ್ಲ. ಯಾವುದೇ ಸ್ತ್ರೀಯು ಒಬ್ಬ ವ್ಯಕ್ತಿಯನ್ನು ಮನದಲ್ಲಿಯೇ ಪತಿ ಎಂದು ಭಾವಿಸಿದರೆ, ಆ ವ್ಯಕ್ತಿಯು ಮರಣವಾದರೆ ಅವಳನ್ನು ವಿಧವೆಯೆಂದು ಗುರುತಿಸಲಾಗುತ್ತಿತ್ತು. ಅಥವಾ ವಿಧವೆಯೆಂದು ತಿಳಿಯಲಾಗುತ್ತಿತ್ತು. ಅಂಥವಳಿಗೂ ಕೂಡ ಮರುವಿವಾಹ ವಾಗಲು ಅವಕಾಶವನ್ನು ನೀಡುತ್ತಿರಲಿಲ್ಲ. ಸ್ತ್ರೀಯು ತನ್ನ ಪತಿಯನ್ನು ಬಿಟ್ಟು ಪರ ಪುರುಷರಲ್ಲಿ ಅನುರಕ್ತಳಾದರೆ ಪತಿಯು ಅವಳನ್ನು ತ್ಯಾಗಮಾಡುತ್ತಿದ್ದನು. "ಅಲ್ತೇಕರವರ ಪ್ರಕಾರ ಕ್ರಿ.ಶ.೧೧ನೇ ಶತಮಾನದವರೆಗೆ ವಿಧವಾ ಪುನರ್ವಿವಾಹವು ಪೂರ್ಣವಾಗಿ ನಿಷೇಧಿತವಾಗಿತ್ತು. ಅಷ್ಟೇ ಅಲ್ಲದೆ ಬಾಲವಿಧವೆಯರ ಸ್ಥಿತಿಯು ಕರುಣಾಜನಕವಾಗಿತ್ತು. ಈ ಕಾರಣದಿಂದಾಗಿ ಸತಿಪದ್ಧತಿಯು ತನ್ನಿಂದ ತಾನಾಗಿಯೇ ರೂಢಿಗೆ ಬಂದಿತು."[೧೨] ಸತಿಪದ್ಧತಿಯೂ ರೂಢಿಗೆ ಬಂದಿರುವುದರಿಂದ ಜೈನ ಮತ್ತು ಬೌದ್ಧ ಧರ್ಮಗಳು ವಿಧವೆಯರಿಗೆ ಪರಿತ್ಯಕ್ತ ಸ್ತ್ರೀಯರಿಗೆ ಕೊಟ್ಟಂಥ ಸ್ವಾತಂತ್ರ್ಯ ಮತ್ತು ಸಮಾನತೆಗಳು ನಷ್ಟವಾದವು.

ವಿಧವೆಯರು ಕೇಶಮುಂಡನ ಮಾಡಿಸಿಕೊಳ್ಳಬೇಕೆಂದು ಸ್ಮೃತಿಕಾರರು ಆಜ್ಞೆಮಾಡಿದರು. ಅವರ ಪ್ರಕಾರ ವಿಧವೆಯಾದವಳು ಸತಿ ಹೋಗದಿದ್ದರೆ ಅವಳು ಕೇಶಮುಂಡನ ಮಾಡಬೇಕು ಒಂದು ವೇಳೆ ಅವಳು ಕೇಶ ಇಟ್ಟುಕೊಂಡರೆ ಅವಳ ಪತಿಯ ಆತ್ಮವು ಪರಲೋಕದಲ್ಲಿಯೂ ಬಂಧನದಲ್ಲಿರುತ್ತದೆ ಎಂದು ಹೇಳಿ ಅವಳನ್ನು ಕೇಶಮುಂಡನ ಮಾಡಿಸಿಕೊಳ್ಳುವಂತೆ ಮಾಡಲಾಗಿದೆ. ಅಲ್ಲದೆ ಮಾಂಗಲ್ಯ ಕಾಲುಂಗರ, ಕುಂಕುಮ, ಬಳೆ, ಹೂ ತೆಗೆಯುವುದಲ್ಲದೆ ಅವಳು ರವಿಕೆ ಹಾಕಿಕೊಳ್ಳದೆ ಒಂದೊತ್ತು ಮಾತ್ರ ಊಟ ಮಾಡಿ ಬಿಳಿಸೀರೆಯನ್ನು ಉಟ್ಟುಕೊಂಡು ಚಾಪೆಯ ಮೇಲೆ ಮಲಗಬೇಕಾಗಿತ್ತು. ಸದಾ ಅವಳು ಮನೆಕೆಲಸ ಇಲ್ಲವೇ, ದೇವರ ಧ್ಯಾನದಲ್ಲಿ ಕಾಲಕಳೆಯ ಬೇಕಾಯಿತು. ವಿಧವೆಯನ್ನು ಕಂಡರೆ ಅವಳನ್ನು ಅಶುಭ

ಎಂದು ಭಾವಿಸಲಾಗುತ್ತಿತ್ತು. ಈ ರೀತಿ ಅವಳು ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಅವಹೇಳನಕ್ಕೆ ಗುರಿಯಾಗುವುದರಿಂದ ಅವಳು ಸದಾ ಮಾನಸಿಕ ತೊಂದರೆಗೆ ಒಳಗಾಗುತ್ತಿದ್ದಳು. ಈ ರೀತಿ ವಿಧವೆಯು ನಿಕೃಷ್ಟ ಜೀವನವನ್ನು ನಡೆಸಲು ಧರ್ಮವೇ ಕಾರಣವಾಗಿದೆ. ಧರ್ಮವು ಪುರುಷ ನಿರ್ಮಿತವಾಗಿರುವುದರಿಂದ ಅದು ಸದಾ ಪುರುಷನ ಹಿತವನ್ನೆ ಬಯಸುವುದು. ಇದರಿಂದ ಸ್ತ್ರೀಯಾದವಳು ಅದರಲ್ಲೂ ವಿಧವೆಯು ಈ ಧರ್ಮದ ಮೂಲಕ ಮತ್ತು ವಿವಾಹದ ನಿಯಮಗಳ ಮೂಲಕ ಅವಳು ನೋವನ್ನು ಅನುಭವಿಸುತ್ತಿದ್ದಾಳೆ.

ಧರ್ಮಶಾಸ್ತ್ರಗಳು ಮಹಿಳೆಯ ಮೇಲೆ ಹೇರಿದ ನಿರ್ಬಂಧನೆಗಳ ಜೊತೆಗೆ ಮುಸ್ಲಿಂ ದಾಳಿಕಾರರಿಂದ ಮಧ್ಯಯುಗದಲ್ಲಿ ಮೊಗಲರ ರಾಜ್ಯಾಡಳಿತದ ಕಾಲದಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಇನ್ನಷ್ಟು ಹೀನಾಯವ್ಯವಸ್ಥೆಗೆ ತಲುಪಿದವು. ಬ್ರಾಹ್ಮಣರು ರಕ್ತ ಶುದ್ಧತೆ, ಸ್ತ್ರೀ ಮತ್ತು ಸತೀತ್ವದ ರಕ್ಷಣೆ ಮತ್ತು ಹಿಂದೂ ಧರ್ಮದ ರಕ್ಷಣೆಯ ಹೆಸರಿನಲ್ಲಿ ಸ್ತ್ರೀಯರನ್ನು ಇನ್ನಷ್ಟು ಕಠಿಣವಾದ ಸಾಮಾಜಿಕ ಬಂಧನಕ್ಕೆ ಒಳಪಡಿಸಿದರು. ಮುಸ್ಲಿಂ ಆಕ್ರಮಣಕಾರರ ಸಮಯದಲ್ಲಿ ಹುಡುಗಿಯರ ಅಪಹರಣ, ಬಲಾತ್ಕಾರದಿಂದ ಬಾಲ್ಯವಿವಾಹ ಮತ್ತು ಹಿಂದೂ ಮಹಿಳೆಯರು ಬೂರ್ಕಾಧರಿಸುವ ಪದ್ಧತಿ ಜಾರಿಗೆ ಬಂದವು. ಹುಡುಗಿ ಸ್ವಲ್ಪ ದೊಡ್ಡವಳಾದರೆಂದರೆ ಮನೆಯಿಂದ ಹೊರಗೆ ಹೋಗುವಂತಿರಲಿಲ್ಲ. ಕಾರಣ ಮುಸ್ಲಿಂ ಧಾಳಿಕಾರರು ಹಿಂದೂ ಮಹಿಳೆಯರಿಗೆ ಶೀಲಹರಣ ಮಾಡುತ್ತಿದ್ದರು. ಆದ್ದರಿಂದ ಶೀಲಹರಣ ಮಾಡುವರೆಂಬ ಭಯದಿಂದ ಬಾಲ್ಯದಲ್ಲಿಯೇ ವಿವಾಹ ಮಾಡಲು ಪ್ರಾರಂಭಿಸಿದರು. ಋತುಮತಿಯರಾದ ಕನ್ಯೆಯರನ್ನು ಮುಸ್ಲಿಂರು ಅಪಹರಣ ಮಾಡಬಹುದೆಂಬ ಭಯದಿಂದ ತಮ್ಮ ಮಕ್ಕಳು ಶೀಲ ಕಳೆದುಕೊಳ್ಳುತ್ತಾರೆ ಎಂಬ ಭಯದಿಂದ ಕನ್ಯಾಪಿತೃರು ಅವರ ಮಕ್ಕಳು ಬಾಲ್ಯದಲ್ಲಿರುವಾಗಲೇ ಮದುವೆಯನ್ನು ಮಾಡಲು ಪ್ರಾರಂಭಿಸಿದರು. ಈ ರೀತಿ ವಿವಾಹ ಮಾಡುವುದು ಅನಿವಾರ್ಯವು ಆಯಿತು. ಇದರಿಂದ ಅವರು ಬಾಲ್ಯದಲ್ಲಿಯೇ ವಿಧವೆಯರಾಗಿ ಜೀವನವೀಡಿ ನರಳುವ ಪರಿಸ್ಥಿತಿಯು ಬಂದಿತು.

ಧರ್ಮಶಾಸ್ತ್ರಗಳು ವಿಧವಾ ಪುನರ್ವಿವಾಹದ ಮೇಲೆ ವಿಧಿಸಿದ್ದ ನಿಷೇಧಗಳನ್ನು ಕಟ್ಟುನಿಟ್ಟಾಗಿ ಆಚರಿಸಲಾಗಿತ್ತು. ಪಾತಿವ್ರತ್ಯದ ವೈಭವೀಕರಣದಿಂದಾಗಿ ವಿಧವೆಯರು ಪುನಃ ವಿವಾಹ ಮಾಡಿಕೊಳ್ಳುತ್ತಿರಲಿಲ್ಲ. ಬಾಲವಿಧವೆಯಾಗಬೇಕಾಗಿ ಬಂದ ನತದೃಷ್ಟ ಸ್ತ್ರೀಯರ ಬಾಳು ನರಕ ಸದೃಶ್ಯವಾಯಿತು. ವಿಧವೆಯರನ್ನು ಅಮಂಗಳಕರ ವ್ಯಕ್ತಿಗಳೆಂದು ಪರಿಗಣಿಸಿ ಅವರಿಗೆ ಧಾರ್ಮಿಕ ಕ್ರಿಯೆಗಳಲ್ಲಿ ಭಾಗವಹಿಸುವ ಹಕ್ಕನ್ನು ನಿರಾಕರಿಸಿದ್ದಲ್ಲದೆ, ಕುಟುಂಬದಲ್ಲಿ ಕೆಲಸಕ್ಕೆ ಇಟ್ಟುಕೊಂಡಂತೆ ಅವರನ್ನು ದುಡಿಸಿಕೊಳ್ಳುತ್ತಿದ್ದರು. ಇದರಿಂದ ಅವರ ಸ್ಥಾನಮಾನ ಬಹಳ ಕನಿಷ್ಟವಾಗಿತ್ತು. ಅಲ್ಲದೆ ವಿಧವೆಯರಿಗೆ ಬಲವಂತವಾಗಿ ಅನೈತಿಕ ಲೈಂಗಿ ವ್ಯವಹಾರ ನಡೆಸುವ ಪರಿಪಾಠವೂ ಪ್ರಾರಂಭವಾಯಿತು. ಕೆಲವು ವಿಧವೆಯರನ್ನು ವೇಶ್ಯಾವಾಟಿಕೆಗೂ ದೂಡಿದರು. ವಿಧವೆಯರ ಲೈಂಗಿಕ ಆಕರ್ಷಣೆಯನ್ನು ತೊಡೆದು ಹಾಕಲು ಕೇಶಮುಂಡನ ಮಾಡಿಸಿ, ಕೆಂಪು




ಸೀರೆ ಉಡಿಸಿ ಎಲ್ಲಾ ಬಗೆಯ ಆಭರಣ ಹಾಗೂ ಸೌಂದರ್ಯ ವರ್ಧಕಗಳನ್ನು ತೆಗೆದರೂ ಸಹ ಲೈಂಗಿಕ ಅಪರಾಧಗಳು ನಡೆಯುತ್ತಲೇ ಇದ್ದವು.

ಮುಸ್ಲಿಂ ಆಕ್ರಮಣಕಾರರು ಮುಖ್ಯವಾಗಿ ಭಾರತದಲ್ಲಿ ಸಂಪತ್ತನ್ನು ದೋಚಲು ಬಂದರು. ಆದರೆ ಇಲ್ಲಿಯ ಪುರುಷರು ಸಂಪತ್ತಿನ ಜೊತೆಗೆ ಎಲ್ಲಿ ತಮ್ಮ ಸ್ತ್ರೀಯರ ಮೇಲೆ ಆಕ್ರಮಣ ಮಾಡುತ್ತಾರೆಂಬ ಭಯದಿಂದ ಬಾಲ್ಯದಲ್ಲಿಯೇ ವಿವಾಹ ಮಾಡಲು ಪ್ರಾರಂಭಿಸಿದರು. ತಮ್ಮ ಶೀಲ ಮತ್ತು ಪಾವಿತ್ರ್ಯಕ್ಕೆ ಎಲ್ಲಿ ಧಕ್ಕೆ ಬರುವುದೆಂಬ ಸಂಶಯದಿಂದ ಪತಿ ಸತ್ತ ಕೂಡಲೇ ಸತಿ ಹೋಗಲು ಪ್ರಾರಂಭಿಸಿದರು. ಪತಿಯು ಮರಣ ಹೊಂದಿದ ಮೇಲೆ ವಿಧವೆಯಾಗಿ ಜೀವನವನ್ನು ನಡೆಸುವುದು ತುಂಬಾ ಕಷ್ಟಕರವಾಗಿತ್ತು. ಮುಸ್ಲಿಂ ದಾಳಿಕೋರರು ಯುವತಿಯಾದ ವಿಧವೆಯ ಮೇಲೆ ಎಲ್ಲಿ ತಮ್ಮ ದೃಷ್ಟಿಯನ್ನು ಹಾಯಿಸುವರು ಎಂದು ಇವರು ತಮ್ಮ ಪಾತಿವ್ರತ್ಯಕ್ಕೆ ಕುಂದುಂಟಾಗಬಹುದೆಂಬ ಭಯದಿಂದ ವಿಧವೆಯರಾಗಿ ಜೀವನವನ್ನು ಸಾಗಿಸದೇ ಸತಿ ಹೋಗಲು ಪ್ರಾರಂಭಿಸಿದರು. ಅಲ್ಲದೆ ಅನೇಕ ಮಹಿಳೆಯರು ಪುರುಷರ ಕೆಟ್ಟ ದೃಷ್ಟಿಯು ಎಲ್ಲಿ ತಮ್ಮ ಮೇಲೆ ಬೀಳುವುದೆಂಬ ಭಯದಿಂದ ಪುರುಷರ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಹಿಂದೂ ಮಹಿಳೆಯರು ಮುಖಕ್ಕೆ ಪರದಾವನ್ನು ಧರಿಸಲು ಪ್ರಾರಂಭಿಸಿದರು. ಈ ರೀತಿಯಾಗಿ ಪರದಾ ಧರಿಸುವುದು, ಸತಿ ಹೋಗುವುದರಿಂದ ಹಿಂದೂ ಮಹಿಳೆಯರು ಬದುಕುವುದೇ ತುಂಬಾ ಕಷ್ಟಕರವಾಯಿತು. ಇದರಿಂದಾಗಿ ಮಹಿಳೆಯು ಮನೆಯ ನಾಲ್ಕು ಗೋಡೆಗಳ ಮಧ್ಯೆ ಜೀವನ ಸಾಗಿಸಬೇಕಾಯಿತು. ಈ ರೀತಿಯಾಗಿ ಸಾಮಾನ್ಯ ಮಹಿಳೆಯರೇ ಜೀವನ ನಡೆಸುವುದು ತೊಂದರೆಯಾಯಿತು. ಅದರಲ್ಲೂ ವಿಧವೆಯರಾಗಿ ಜೀವನ ನಡೆಸುವುದು ತುಂಬಾ ತೊಂದರೆದಾಯಕವಾಗಿ ಸತಿ ಪದ್ಧತಿ ಆಚರಿಸಲು ಪ್ರಾರಂಭಿಸಿದರು. ಹೀಗೆ ಅನೇಕ ಮಹಿಳೆಯರು ತಮ್ಮ ಪಾತಿವ್ರತ್ಯವನ್ನು ಕಾಪಾಡಲು ಸತಿ ಹೋದರು. ಆದರೆ ವಿಧವಾ ವಿವಾಹವು ಮೇಲು ಜಾತಿಯವರಿಗೆ ತುಂಬಾ ಕಷ್ಟಕರವಾಗಿತ್ತು. ಆದರೆ ವಿಧವಾ ವಿವಾಹವು ಕೇವಲ ಕೆಳಜಾತಿಯವರಿಗೆ ಮಾತ್ರ ಸೀಮಿತವಾಗಿತ್ತಿ. ಈ ರೀತಿ ಕೆಳಜಾತಿಗಳಲ್ಲಿ ವಿಧವೆಯರು ಮರುವಿವಾಹವಾಗುವುದಕ್ಕೆ ಉಡಿಕೆ ಎನ್ನುವರು.

## ಉಡಿಕೆ ಪದ್ಧತಿ

ಒಂದು ಗಂಡು ಮತ್ತು ಒಂದು ಹೆಣ್ಣು ಕೆಲವು ಆಚರಣೆಗಳ ಮೂಲಕ ಒಂದುಗೂಡಿಸುವ ವಿಧವೆ ಮದುವೆ ಅಂದರೆ ಅವರ ಲೈಂಗಿಕ ಬದುಕಿಗೆ ಸಾರ್ವಜನಿಕ ಒಪ್ಪಿಗೆ ಕೊಡುವುದು. ಇದನ್ನು ಹಿಂದೂಗಳಲ್ಲಿ ಒಂದು ಧಾರ್ಮಿಕ ಸಂಸ್ಕಾರವೆಂದು ಪವಿತ್ರೀಕರಿಸಿ ವಿಧಿಪೂರ್ವಕವಾಗಿ ಶಾಸ್ತ್ರೋಕ್ತವಾಗಿ ನೆರವೇರಿಸುವರು. ಪಾಶ್ಚಿಮಾತ್ಯರಲ್ಲಿ ಮದುವೆ ಒಂದು ಕರಾರಾಗಿದೆ. ಅದೇ ರೀತಿ ಮುಸ್ಲಿಂರಲ್ಲಿ ಮದುವೆ ಒಂದು ಸಾಮಾಜಿಕ ಒಪ್ಪಂದವಾಗಿದೆ. ಕಾರಣ ಇವರಲ್ಲಿ ಮರುಮದುವೆ ಮತ್ತು ವಿಚ್ಛೇದನಗಳು ಸಮಸ್ಯೆಯಾಗಿ ಪರಿಣಮಿಸುವುದಿಲ್ಲ.

ಆದರೆ ಹಿಂದೂಗಳಲ್ಲಿ ಇವುಗಳು ದೊಡ್ಡ ಸಮಸ್ಯೆಗಳಾಗಿವೆ. ಒಂದು ಬಾರಿ ಮದುವೆಯಾದರೆ ಮುಗಿಯಿತು ಜೀವನಪರ್ಯಂತ ಅದನ್ನು ಮುಂದುವರಿಸಿಕೊಂಡು ಹೋಗಬೇಕು. ದಂಪತಿಗಳಲ್ಲಿ ಹೊಂದಿಕೆಯಾಗದಿದ್ದರೆ ಬೇರೆ ಬೇರೆಯಾಗಿ ಬದುಕಬೇಕು. ಗಂಡಸರು ಮರುಮದುವೆ ಮಾಡಿಕೊಳ್ಳುವರು ಇಲ್ಲವೇ ಉಪಪತ್ನಿಯರನ್ನು ಹೊಂದುವರು. ಆದರೆ ಹೆಣ್ಣು ಮರುಮದುವೆಯಾಗುವಂತಿಲ್ಲ. ಅವಳು ತನ್ನ ಜೀವನ ಪರ್ಯಂತ ಹಾಗೆಯೇ ಇರಬೇಕು. ಗಂಡಸತ್ತರೆ ಸಹಗಮನ ಮಾಡಬೇಕು ಅಥವಾ ತನ್ನ ಜೀವನವಿಡಿ ವಿಧವೆಯಾಗಿಯೇ ಉಳಿಯಬೇಕಿತ್ತು. ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಹೊಂದಿದ ಹಿಂದುಗಳಲ್ಲಿ ಗಂಡಸರು ಮರುಮದುವೆ ಮಾಡಿಕೊಳ್ಳುವ, ಉಪಪತ್ನಿಯರನ್ನು ಹೊಂದುವ ಅವಕಾಶವನ್ನು ಧರ್ಮಶಾಸ್ತ್ರಗಳು ಕಲ್ಪಿಸಿಕೊಟ್ಟಿವೆ. ಸ್ತ್ರೀಯರಿಗೆ ಈ ಅವಕಾಶವನ್ನು ಕೊಡದೇ ತದ್ವಿರುದ್ಧವಾಗಿ ಕಟ್ಟುಪಾಡುಗಳನ್ನು ಹೇರಿದೆ. ಪ್ರಕೃತಿಯೂ ಗಂಡಿಗೂ ಮತ್ತು ಹೆಣ್ಣಿಗೂ ಸಮಾನ ನಿಯಮಗಳನ್ನು ಒದಗಿಸಿದರೂ ಸಮಾಜದ ಧೋರಣೆಗಳು ಗಂಡಿನ ಪರವಹಿಸಿ ಹೆಣ್ಣಿನ ಸ್ಥಾನಮಾನವನ್ನು ಮೊಟಕುಗೊಳಿಸುವುದರ ಮೂಲಕ ಅಥವಾ ಕೊನೆಗಾಣಿಸುವುದರ ಮೂಲಕ ಸ್ತ್ರೀಕುಲಕ್ಕೆ ಅನ್ಯಾಯ ಮಾಡಿದೆ.

ಕ್ರೈಸ್ತ-ಮುಸ್ಲಿಂ ಮುಂತಾದ ಧರ್ಮಗಳಲ್ಲಿ ಅದರಲ್ಲಿಯೂ ಪಾಶ್ಚಿಮಾತ್ಯ ಸಮಾಜದಲ್ಲಿ ವಿಧವೆತನವನ್ನು ಅನಿಷ್ಟವೆಂದು ತಿಳಿದಿಲ್ಲ. ಹೆಂಡತಿ ಸತ್ತರೆ ಅಥವಾ ಹೆಂಡತಿಯನ್ನು ಬಿಟ್ಟವರು ಅದರಂತೆ ಗಂಡಸತ್ತ ವಿಧವೆ ಅಥವಾ ಗಂಡನನ್ನು ಬಿಟ್ಟವಳು ಸಾಮಾಜಿಕವಾಗಿಯಾಗಲಿ, ಧಾರ್ಮಿಕವಾಗಿಯಾಗಲಿ ಯಾವುದೇ ಅಡೆತಡೆಯಿಲ್ಲದೆ ಮತ್ತೊಂದು ಮದುವೆ ಮಾಡಿಕೊಳ್ಳಲು ಅವಕಾಶವಿದೆ. ಹಿಂದೂ ಧರ್ಮಶಾಸ್ತ್ರಗಳು ಮತ್ತು ಕೆಲವು ಸ್ಮೃತಿಗಳು ಹೆಂಡತಿ ಸತ್ತ ವಿಧುರರು ಮರುಮದುವೆ ಮಾಡಿಕೊಳ್ಳುವುದನ್ನು ಒಪ್ಪುತ್ತವೆ, ಆದರೆ ಗಂಡಸತ್ತ ವಿಧವೆಯು ಮರುಮದುವೆಯಾಗುವುದನ್ನು ಕಠೋರವಾಗಿ ವಿರೋಧಿಸುತ್ತವೆ. ವಿಧವೆ ಅಥವಾ ಗಂಡನನ್ನು ಬಿಟ್ಟವಳು ಮರುಮದುವೆ ಮಾಡಿಕೊಳ್ಳುವ ಹಕ್ಕಿಲ್ಲ ಮತ್ತು ಸಾಮಾಜಿಕ ಪುರಸ್ಕಾರವೂ ಇಲ್ಲ. ಆದಿವಾಸಿಗಳಲ್ಲಿ ಮತ್ತು ಬುಡಕಟ್ಟು ಜನಾಂಗಗಳಲ್ಲಿ ವಿಧವೆಯ ಮದುವೆಯನ್ನು 'ಉಡಿಕೆ' ಯೆಂಬ ವಿಶೇಷ ಹೆಸರಿನಿಂದ ಕರೆಯುವರು.

ವಿಶೇಷವಾಗಿ ಬುಡಕಟ್ಟು ಜನಾಂಗದವರಲ್ಲಿ ವಿಧವೆಯರ ಸಮಸ್ಯೆಯನ್ನು ಸಮುದಾಯದ ಸಮಸ್ಯೆಯೆಂದು ತಿಳಿದು ಅವಳ ಸಮಸ್ಯೆಗಳಿಗೆ ದಾರಿತೋರಿಸುವರು. ಅವಳನ್ನು ವಿವಾಹವಾಗಿ ವಿಧವೆಯ ಮೊದಲಿ ಪತಿಯ ಮಕ್ಕಳನ್ನು ಅನಾಥರನ್ನಾಗಿ ಮಾಡದೆ, ಉಡಿಕೆ ಗಂಡನೆ ನೋಡಿಕೊಳ್ಳುವನು. ಹೀಗಾಗಿ ಬುಡಕಟ್ಟು ಜನಾಂಗದಲ್ಲಿ ವಿಧವೆಯಾಗಿಯೇ ಕಾಲಕಳೆಯುವಂತೆ ಅವಳಿಗೆ ಮರುವಿವಾಹ ಮಾಡಿ ಜೀವನವನ್ನು ನಡೆಸಲು ಬುಡಕಟ್ಟು ಸಮುದಾಯವು ದಾರಿಮಾಡಿಕೊಟ್ಟಿದೆ. ಬುಡಕಟ್ಟು ಸಮುದಾಯದಲ್ಲಿ ವಿಧವೆಯರ ಸಮಸ್ಯೆಯನ್ನು ಅವಳ ವೈಯಕ್ತಿಕ ಸಮಸ್ಯೆಯೆಂದು ತಿಳಿಯದೆ ಇಡೀ ಸಮುದಾಯದ ಸಮಸ್ಯೆಯೆಂದು

ತಿಳಿದು ಆ ಸಮಸ್ಯೆಯ ಬಗ್ಗೆ ಇಡೀ ಸಮುದಾಯವು ಯೋಚಿಸಿ ಒಂದು ನಿರ್ಧಾರವನ್ನು ಕೈಗೊಳ್ಳುವುದು. ಆದರೆ ನಾಗರೀಕತೆ ಬೆಳೆದ ಸಮಾಜದಲ್ಲಿ ವಿಧವೆಯರ ಸಮಸ್ಯೆಯನ್ನು ಸಮುದಾಯದ ಸಮಸ್ಯೆಯೆಂದು ತಿಳಿಯದೆ ಅದು ಅವಳ ವೈಯಕ್ತಿಕ ಸಮಸ್ಯೆಯೆಂದು ತಿಳಿದು ಅವಳ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಹಿಡಿಯುವುದಿಲ್ಲ. ಹೀಗಾಗಿ ಅವಳು ಆರ್ಥಿಕವಾಗಿ ತೊಂದರೆಗೀಡಾಗಿ, ಬದುಕುವುದೇ ಕಷ್ಟಕರವಾಗಿದೆ. ಇದರಿಂದಾಗಿ ನಾಗರೀಕ ಸಮುದಾಯಗಳಲ್ಲಿ ವಿಧವೆಯು ಬಹಳ ಕಷ್ಟಕರವಾದ ಜೀವನವನ್ನು ನಡೆಸುತ್ತಿದ್ದಾಳೆ.

"ವೀರಶೈವರಲ್ಲಿಯೂ ಸಹ ಉಡಿಕೆ ಪದ್ಧತಿ ಇದೆ. ಹಾಗೆಯೇ ಭಂಟರಲ್ಲಿ, ಸಾರಸ್ವತರಲ್ಲಿ, ಕೊಡವರಲ್ಲಿ, ಲಂಬಾಣಿಗಳಲ್ಲಿ, ದೊಂಬರಲ್ಲಿ, ಕಾಡುಗೊಲ್ಲರಲ್ಲಿ, ಗೊಂಡರಲ್ಲಿ, ಸೋಲಿಗರಲ್ಲಿ, ನಾಯಕರಲ್ಲಿ, ಇಲ್ಲಿಗರಲ್ಲಿ, ತೋಡವರಲ್ಲಿ, ಹಲಸರಲ್ಲಿ, ಉಪ್ಪಾರರಲ್ಲಿ, ಕೋಳಿ ಸಮಾಜದವರಲ್ಲಿ, ಬಡಗರಲ್ಲಿ ಮುಂತಾದ ಜನಾಂಗಗಳಲ್ಲಿ ವಿಧವೆಯರು ಮದುವೆಯಾಗುವ ಪದ್ಧತಿಯಿದೆ."[೧೩] ಪ್ರತಿಯೊಂದು ಆದಿವಾಸಿ ಜನಾಂಗದಲ್ಲಿ ಈ ಪದ್ಧತಿ ಆಚರಣೆಯಲ್ಲಿದೆ. ಆದರೆ ಈ ಆಚರಣೆಗಳು ಮದುವೆಯ ಹಾಗೆ ವಿಜ್ರಂಭಣೆಯಿಂದ ಆಚರಿಸುವುದಿಲ್ಲ. ಮದುವೆಯೆಂಬ ಹೆಸರಿನಿಂದಲೂ ಕರೆಯುವುದಿಲ್ಲ. ಹಾಗೆಯೇ ಇದು ಮಂಗಳಕರವಾದುದು ಅಲ್ಲ. "ವಿಧವೆಯ ಮದುವೆಗೆ ಉಡಿಕೆ, ಉಡುಕೆ, ಉಡಕಿ, ಊಟಿಕೆ, ಕೂಟಿಕೆ, ಕೂಡಿಕೆ, ಕೂಡಾವಳಿ, ಕೂಡುವಳಿ, ಸೀರುಡಿಕೆಗಳೆಂದು ಕರೆಯುವರು."[೧೪]

ವಿಧವೆಯರು ಮಾಡಿಕೊಳ್ಳುವ ಪುನರ್ವಿವಾಹಕ್ಕೆ ಉಡಿಕೆಯೆಂದು ಕರೆಯುವರು. ಈ ಪದ್ಧತಿಯು ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿದೆ. "ಋಗ್ವೇದಗಳ ಕಾಲದಲ್ಲಿ ವಿಧವೆಯರು ಕೆಲವು ಸಂದರ್ಭದಲ್ಲಿ ಪುನರ್ವಿವಾಹ ಮಾಡಿಕೊಳ್ಳುವ ಅವಕಾಶವಿತ್ತು. ಅದೇ ಸೂತ್ರಗಳ ಕಾಲದಲ್ಲಿ ವಿವಾಹವನ್ನು ನಿಷೇಧಿಸಲಾಗಿತ್ತು. ಮನು ಪುನರ್ವಿವಾಹವನ್ನು ಕೆಲವು ಸಂದರ್ಭಗಳಲ್ಲಿ ಮಾತ್ರ ಒಪ್ಪಿದ್ದಾನೆ. ಗಂಡನಾದವನು ತಲೆಮರೆಸಿಕೊಂಡು ಹೋಗಿದ್ದರೆ, ಸನ್ಯಾಸಿಯಾಗಿದ್ದರೆ, ಜಾತಿಭ್ರಷ್ಟನಾಗಿದ್ದರೆ, ನಪುಂಸಕನಾಗಿದ್ದರೆ, ಸ್ತ್ರೀಯಾದವಳು ಪುನಃ ವಿವಾಹವಾಗಲು ಒಪ್ಪಿದ್ದಾನೆ. ಆದರೆ ಈ ವಿವಾಹವನ್ನು ಯಾವ ರೀತಿಯಲ್ಲಿ ನೇರವೇರಿಸುವುತ್ತಿದ್ದರೆಂಬುದು ತಿಳಿದಿಲ್ಲ."[೧೫] ವಿಧವೆ ವಿಧುರರು ಗಂಡ-ಹೆಂಡತಿಯರಾಗುವ ಒಂದು ವಿಧಿಗೆ ಮದುವೆ ಎನ್ನುವುದಿಲ್ಲ. "ಉಡಿಕೆ ಗಂಡನಲ್ಲ, ಉಡಿಕೆ ಹೆಣ್ತಿಯಲ್ಲ, ಉಡಿಕೆ ನೆಂಟನಲ್ಲ ಉಡಿಕೆ ಮದುವೆಯಲ್ಲ, ಉಡಿಕೆ ಗಂಡನ ಉಪ್ಪದ್ರಬಾಳ ಇತ್ಯಾದಿ ಮಾತುಗಳು ಉಡಿಕೆ ಸಂಬಂಧ ಮದುವೆ ಮಾಡಿಕೊಂಡವರಷ್ಟು ಅನ್ಯೋನ್ಯವಾಗಿರುವುದಿಲ್ಲವೆಂದು ಜನಪದರು ನಂಬಿದ್ದಾರೆ".[೧೬] ಈ ಪದ್ಧತಿಯನ್ನು ಧರ್ಮಶಾಸ್ತ್ರಗಳು ಒಪ್ಪದಿದ್ದರು ಜನರು ಇದನ್ನು ಒಪ್ಪಿಕೊಂಡಿದ್ದಾರೆ. ಆದರೆ ಮದುವೆಗಿರುವಷ್ಟು ಮಹತ್ವ ಉಡಿಕೆಗಿಲ್ಲ. ಈ ಮದುವೆಯು ಕದ್ದು ನಡೆಯುತ್ತದೆ. ಈ ಮದುವೆಯಲ್ಲಿ ಬಹಳಷ್ಟು ಜನ

ಭಾಗವಹಿಸುವುದಿಲ್ಲ. ರಾತ್ರಿ ಸುಮಾರು ಹತ್ತು ಗಂಟೆಯಿಂದ ಬೆಳಗ್ಗೆ ನಾಲ್ಕುಗಂಟೆಯವರೆಗೂ ಈ ಮದುವೆ ಮಾಡುವರು. ಈ ಮದುವೆಯೂ ರಾತ್ರಿಯಲ್ಲಿ ನಡೆದರು ಅಮವಾಸೆಯ ಕತ್ತಲಲ್ಲಿ ಮಾಡುವರು. ಅಲ್ಲದೆ ಉಡಿಕೆ ದಂಪತಿಗಳಿಗೆ ಹುಟ್ಟಿದ ಗಂಡಿಗೂ ಉಡಿಕೆ ದಂಪತಿಗಳಿಗೆ ಹುಟ್ಟಿದ ಹೆಣ್ಣಿಗೂ ಮದುವೆ ಮಾಡಬಾರದೆಂಬ ನಂಬಿಕೆಯಿದೆ. ಮದುವೆಯಲ್ಲಿ ಗಂಡು ಹೆಣ್ಣಿಗಿಂತ ವಯಸ್ಸಿನಲ್ಲಿ ದೊಡ್ಡವನಾಗಿರಬೇಕು. ಆದರೆ ಉಡಿಕೆಯಲ್ಲಿ ವಯಸ್ಸಿನ ಅಂತರ ನೋಡುವುದಿಲ್ಲ. ಮದುವೆಯಂತೆ ಉಡಿಕೆಯ ಕಾರ್ಯದಲ್ಲಿ ನಿಶ್ಚಯ ನಡೆಯುವುದಿಲ್ಲ. ವಧುವರರಿಬ್ಬರು ನೋಡಿ ಒಪ್ಪಿಗೆ ಸೂಚಿಸುವುದಿಲ್ಲ. ವಿಧಿಪೂರ್ವಕವಾಗಿ, ಶಾಸ್ತ್ರೋಕ್ತವಾಗಿ ಮಾಡಲು ಧರ್ಮಶಾಸ್ತ್ರಗಳು ಮನ್ನಣೆ ನೀಡುವುದಿಲ್ಲ. ಇಂಥಹ ಮದುವೆಗೆ ತಿಥಿ, ಮಿಥಿ ನೋಡುವುದಿಲ್ಲ.

ಉಡಿಕೆಯಾಗಲಿರುವ ಹೆಣ್ಣನ್ನು ಉಡಿಕೆಯನ್ನು ಹಚ್ಚುವ ಮನೆಗೆ ಹಗಲು ಹೊತ್ತಿನಲ್ಲಿ ಕರೆದು ತರವುದಿಲ್ಲ. ರಾತ್ರಿ ಸಮಯದಲ್ಲಿ ಅದು ಕತ್ತಲೆಯಲ್ಲಿ ಮಾತ್ರ ಕರೆದುತರುವರು. ಬೇರೆ ಊರಿನಿಂದ ಬಂದರು ರಾತ್ರಿಯಾಗುವವರೆಗೆ ಹೊಲದಲ್ಲಿ ಉಳಿದು ಕತ್ತಲೆಯಾದ ಮೇಲೆ ಮನೆಗೆ ಬರುವರು. ಅಥವಾ ಸಂಬಂಧಿಕರ ಮನೆಯಲ್ಲಿಯೇ ಉಳಿದು ಕತ್ತಲೆಯಾದ ಮೇಲೆ ಉಡುಕಿ ಹಚ್ಚುವ ಕೋಣೆಗೆ ಬಂದು ದೀಪದ ಮಂದ ಬೆಳಕಿನಲ್ಲಿ ಅಥವಾ ದೀಪ ಇಲ್ಲದೆ ಕತ್ತಲೆಯಲ್ಲಿಯೇ ಇರುವರು. ಉಡಿಕೆಯೂ ಯಾವಾಗಲೂ ಗಂಡನ ಮನೆಯಲ್ಲಿಯೆ ನಡೆಯುವುದು. ಒಬ್ಬರ ಮುಖ ಒಬ್ಬರು ನೋಡದಂತೆ ಮಂದ ಬೆಳಕಿನಲ್ಲಿ ಕೋಣೆಯ ಒಂದು ಮೂಲೆಯಲ್ಲಿ ಕಂಬಳಿ ಹಾಕಿ ಅದರ ಮೇಲೆ ಶಾಶಿ ಹಾಕುವರು. ವಿಧವೆಯ ಸೀರೆಯ ಸೆರಗಿಗೂ ಮತ್ತು ಶೆಲ್ಲೆಕ್ಕೂ ಗಂಟು ಹಾಕುವರು. ಕೆಲವೊಂದು ಜನಾಂಗದಲ್ಲಿ ವಿಧುರನು ವಿಧವೆಗೆ ತಾಳಿಕಟ್ಟುವುದಿಲ್ಲ. ಜಂಗಮನಿದ್ದರೆ ಜಂಗಮ ಕಟ್ಟುವನು ಅಥವಾ ಬೇರೆ ವಿಧುರ ಕಟ್ಟುವನು. ಕೆಲವೊಂದು ಜಾತಿಗಳಲ್ಲಿ ಉಡಿಕೆಯ ಸಂದರ್ಭದಲ್ಲಿ ವಿಧುರನೆ ವಿಧವೆಗೆ ತಾಳಿಯನ್ನು ಕಟ್ಟುವನು. ಉಡಿಕೆಯಲ್ಲಿ ಗಂಡ ಹೆಂಡತಿಗೆ ಹೆಂಡತಿ ಗಂಡನಿಗೆ ಅಕ್ಷತೆ ಹಾಕುವರು, ಬೇರೆಯವರು ಯಾರು ಅಕ್ಷತೆ ಹಾಕುವುದಿಲ್ಲ. ಗಂಡಹೆಂಡತಿಯರನ್ನು ಅದೇ ಕೋಣೆಯಲ್ಲಿ ಬಿಟು ಬಾಗಿಲು ಮುಚ್ಚುವರು. ಉಡುಕಿ ಯಾದವರು ನಸುಕಿನಲ್ಲಿ ಎದ್ದು ಸ್ನಾನ ಮಾಡಿಕ ಹೊಸ ಬಟ್ಟೆ ಹಾಕಿಕೊಂಡು ಹನುಮಾನ ಮಂದಿರಕ್ಕೆ ಹೋಗಿ ದರ್ಶನ ಮಾಡಿ ಕಾಯಿ ಕರ್ಪೂರ ಮಾಡುವರು. ದೇವರಿಗೆ ಹೋಗಿ ಬರುವಾಗ ಯಾರು ಉಡುಕಿ ದಂಪತಿಗಳನ್ನು ನೋಡಬಾರದು ಎನ್ನುವ ನಂಬಿಕೆಯಿದೆ. ಉಡಿಕೆ ಸಮಾರಂಭದಲ್ಲಿ ಊರ ಜನರಿಗೆ ಊಟ ಹಾಕಿಸುವುದಿಲ್ಲ. ಅಡಿಗೆ ಮಾಡಿ ಊಟಕ್ಕೆ ಹೇಳಿದರೂ ಊಟಕ್ಕೆ ಯಾರು ಬರುವುದಿಲ್ಲ. ಉಡಿಕೆಯಾದವರು ಮದುವೆ ಮುಂಜಿವೆಗಳಲ್ಲಿ, ಹಬ್ಬ ಹರಿದಿನಗಳಲ್ಲಿ, ಪೂಜಾ ಸಮಾರಂಭಗಳಲ್ಲಿ ಭಾಗವಹಿಸುವಂತಿಲ್ಲ. ಇವರು ತಮ್ಮ ಮುತ್ತೈದಿತನ ಕಳೆದುಕೊಳ್ಳುತ್ತಾರೆ.

# ಉಡಿಕೆ ಹಚ್ಚುವಲ್ಲಿ ಅಥವಾ ಉಡಿಕೆ ಕಟ್ಟುವಲ್ಲಿ ವಿವಿಧ ಜಾತಿಗಳಲ್ಲಿ ಆಚರಿಸುವ ಪದ್ಧತಿಗಳು

## ಉಪ್ಪಾರರಲ್ಲಿ ಸೀರುಡಿಕೆ

ಸೀರುಡಿಕೆ ಎಂದರೆ ವಿಧುರ ಮತ್ತು ವಿಧವೆಯ ನಡುವೆ ನಡೆಯುವ ಮದುವೆ. ಇದು ಆರ್ಥಿಕವಾಗಿ ಕೆಳವರ್ಗದಲ್ಲಿ ಇರುವ ಕುಟುಂಬಗಳಲ್ಲಿ ಇದಕ್ಕೆ ಪ್ರಾಶಸ್ತ್ಯವಿದೆ. ಹಿಂದೆ ಸ್ತ್ರೀಯರು ಗರ್ಭಿಣಿಯರಾಗಿದ್ದಾಗ, ರೋಗ, ರುಜಿನಗಳಿಂದ ಅಕಾಲಮರಣವನ್ನು ಹೊಂದುತ್ತಿದ್ದರು. ಈ ಕಾರಣದಿಂದ ಪುರುಷರು ಮರುಮದುವೆ ಮಾಡಿಕೊಳ್ಳುತ್ತಿದ್ದರು. ಹೆಂಡತಿಯನ್ನು ಕಳೆದುಕೊಂಡವರು ಅಲ್ಲದೆ, ಹೆಂಡತಿ ಇದ್ದವರೂ ಸಹ 'ಸೀರುಡಿಕೆ' ಮಾಡಿಕೊಳ್ಳುತ್ತಿದ್ದರು. ಸೀರುಡಿಕೆ ಮಾಡಿಕೊಳ್ಳುವ ವಿಧವೆಯು ತನ್ನ ಮೊದಲ ಗಂಡನಿಂದ ಹುಟ್ಟಿದ ಮಕ್ಕಳನ್ನು ಮೃತ ಗಂಡನ ಮನೆಯಲ್ಲಿಯೇ ಬಿಟ್ಟು ಬರಬೇಕಾಗುತ್ತಿತ್ತು. ಕಾರಣ ಹೊಸದಾಗಿ ಕೂಡಿದವನು ಆ ಮಕ್ಕಳಿಗೆ ತನ್ನ ಆಸ್ತಿಯಲ್ಲಿ ಹಕ್ಕು ಕೊಡಲು ನಿರಾಕರಿಸುತ್ತಿದ್ದನು. ಉಪ್ಪಾರರಲ್ಲಿ ಗಂಡನನ್ನು ಕಳೆದುಕೊಂಡವಳನ್ನು ತವರಿಗೆ ಕಳುಹಿಸಿಕೊಡುತ್ತಿದ್ದರು. ಕಾರಣ ಇವಳು ಚಿಕ್ಕ ವಯಸ್ಸಿನಲ್ಲಿಯೇ ವಿಧವೆಯಾದುದರಿಂದ ಅವಳಿಗೆ ಮರುಮದುವೆ ಮಾಡುವ ಉದ್ದೇಶದಿಂದ ಅವಳು ಗಂಡನ ಮನೆಯಲ್ಲಿಯೇ ಇದ್ದರೆ ಮರುಮದುವೆ ಮಾಡಿಕೊಳ್ಳಲು ಹಕ್ಕು ಇರುತ್ತಿರಲಿಲ್ಲ. ಆದ್ದರಿಂದ ತವರಿಗೆ ಹೋಗಿ ತನ್ನ ದುಃಖ ಮರೆಯಾದ ನಂತರ ಮದುವೆ ಮಾಡುತ್ತಿದ್ದರು. ಉಪ್ಪಾರರಲ್ಲಿ ಮದುವೆಯು ಮಧ್ಯರಾತ್ರಿ ಊರಿನ ದೇವಾಲಯದಲ್ಲಿ ಮಾಡುವರು. ವಿಧುರನಾದವನು ಊರಿನ ಪ್ರಮುಖರಾದವರೊಡನೆ ಪ್ರಸ್ತಾಪಿಸಿ ನಂತರ ವಿಧವೆಯ ಮೃತ ಗಂಡನ ಮನೆಯವರೊಂದಿಗೆ ಮಾತನಾಡಿ ಮದುವೆಯ ದಿನ ಗೊತ್ತುಪಡಿಸಿಕೊಳ್ಳುತ್ತಾನೆ.

ಕೂಡಿಕೆಯೂ ಬಹಳ ಸರಳ ರೀತಿಯಲ್ಲಿ ನಡೆಯುತ್ತದೆ. ಮದುವೆಯಾಗುವ ಸಂಜೆ ವಿಧವೆಯನ್ನು ತಂದೆಯ ಮನೆಯ ಹಿಂಬಾಗಿಲಿನಿಂದ ದೇವಸ್ಥಾನಕ್ಕೆ ಕರೆದುಕೊಂಡು ಬಂದು ಸ್ನಾನ ಮಾಡಿಸಿ ವಿಧುರ ಅಥವಾ ಮದುವೆಯಾಗುವ ವರನು ಕೊಟ್ಟ ಹೊಸ ಸೀರೆ, ರವಿಕೆ ತೊಡಿಸಿ, ಅರಿಶಿಣ, ಕುಂಕುಮ, ಮೂಗುತಿ, ಬೆಂಡೋಲೆ, ಬಳೆಗಳಿಂದ ಸಿಂಗರಿಸಿ ದೇವಸ್ಥಾನದಲ್ಲಿ ಕೂಡಿಸುತ್ತಿದ್ದರು. ಇತ್ತ ಗಂಡಿನ ಕೈಯಿಂದ ಎಕ್ಕೆಗಿಡಕ್ಕೆ ತಾಳಿಕಟ್ಟಿಸಿ ನಂತರ ವಿಧವೆಗೆ ತಾಳಿಕಟ್ಟಿ ಸೀರುಡಿಕೆ ಮಾಡಿಕೊಳ್ಳುತ್ತಿದ್ದರು.

## ಹಲಸರಲ್ಲಿ ಸೀರುಡಿಕೆ

ಹಲಸರಲ್ಲಿ ವಿಧವೆಯಾದವಳು ತನ್ನ ಗಂಡನ ಸಹೋದರನನ್ನು ಬಿಟ್ಟು ಬೇರೆ ಯಾರನ್ನಾದರೂ ಮದುವೆಯಾಗಬಹುದು. ಈ ಸೀರುಡಿಕೆ ಮದುವೆಗಳಲ್ಲಿ ಮುತ್ತೈದೆಯರು, ಮಕ್ಕಳು ಭಾಗವಹಿಸುವುದಿಲ್ಲ.

ಕೇರಿಯ ಹಿರಿಯರು, ವಯಸ್ಸಾದ ಹೆಂಗಸರು, ವಿಧವೆಯ ಸಂಬಂಧಿಕರು ಸೇರುತ್ತಾರೆ. ವಿಧವೆ ಮತ್ತು ವಿಧುರರ ನಡುವೆ ಕರಿ ಕಂಬಳಿಯಿಂದ ತೆರೆಹಿಡಿದು, ಹಣತೆ ದೀಪ ಹಚ್ಚಿಕೊಂಡು, ಹಿರಿಯರು ಧಾರೆ ಎರೆದು ತಾಳಿಕಟ್ಟಿಸುವರು. ಕೂಡಿಕೆಯ ಗಂಡನು ಎಲ್ಲರಿಗೂ ಮಾಂಸದ ಊಟ ಹಾಕಿಸುವನು. ಸೀರುಡಿಕೆ ಮಾಡಿಕೊಂಡವರು ಊರಿನಲ್ಲಿ ನಡೆಯುವ ಯಾವುದೇ ಮಂಗಳ ಕಾರ್ಯದಲ್ಲಿ ಭಾಗವಹಿಸುವಂತಿಲ್ಲ. ಹಾಗೆಯೇ ಬಂಧುಗಳಲ್ಲಿ ನಡೆಯುವ ಮಂಗಳಕಾರ್ಯಗಳಲ್ಲಿಯೂ ಇವರನ್ನು ಸೇರಿಸಿಕೊಳ್ಳುವುದಿಲ್ಲ. ಇವರು ಮಂಗಳ ಕಾರ್ಯಗಳಿಗೆ ಬಂದರೂ, ಆ ಮಂಗಲಕಾರ್ಯ ಮುಗಿಯುವವರೆಗೂ ಪಕ್ಕದ ಮನೆಯಲ್ಲಿ ಕೂಡಿಸುವರು ಮತ್ತು ಅವರಿಗೆ ಅಲ್ಲಿಯೇ ಊಟಹಾಕುವರು.

ಹಲಸರಲ್ಲಿ ಮದುವೆಯಾಗದವನು ವಿಧವೆಯನ್ನು ಮದುವೆಯಾಗುವ ಅವಕಾಶವಿದೆ. ಇವನು ವಿಧವೆಯನ್ನು ಮದುವೆಯಾಗಬೇಕಾದರೆ ಸಮಾಜಕ್ಕೆ ಇಪ್ಪತ್ತು ರೂಪಿಯ ದಂಡ ಕಟ್ಟಬೇಕಾಗುತ್ತದೆ. ಮದುವೆಯಾಗುವ ಮೊದಲು ಎಕ್ಕೆಗಿಡದ ಜೊತೆ ಲಗ್ನವಾಗಿ ನಂತರ ಸೀರುಡಿಕೆ ಮಾಡಿಕೊಳ್ಳುವರು. ಈ ರೀತಿಯ ಮದುವೆಯಲ್ಲಿಯೂ ಸಹ ವಿಧವೆಯರು, ಸೀರುಡಿಕೆ ಮಾಡಿಕೊಂಡವರು ಮಾತ್ರ ಭಾಗವಹಿಸುತ್ತಾರೆ. ಮದುವೆಗಾಗಿ ಗಂಡು ಹೆಣ್ಣಿಗೆ ಐದು ಬಳೆ, ಮೂಗುತಿ, ಕಪ್ಪುಸೀರೆ ಹಾಗೂ ಕಪ್ಪು ಕುಪ್ಪಸ ಕೊಡುವನು. ಅವುಗಳನ್ನು ತೊಟ್ಟುಕೊಂಡ ಮೇಲೆ ಅವರಿಬ್ಬರ ಬಟ್ಟೆಯ ತುದಿ ಅಂಚಿಗೆ ಗಂಟು ಹಾಕುತ್ತಾರೆ. ನಂತರ ಅಕ್ಕಿತೊಳೆದ ನೀರನ್ನು ಅವರ ಕೈಗೆ ಹಾಕುವರು ಈ ನೀರನ್ನು ಅವರು ಕುಡಿಯಬೇಕು. ಇಲ್ಲಿ ತಾಳಿಕಟ್ಟುವ ಸಂಪ್ರದಾಯವಿಲ್ಲ.

ಹಲಸರಲ್ಲಿಯೇ ಇನ್ನೊಂದು ಪದ್ಧತಿಯಲ್ಲಿ ವಿವಾಹವಾಗುವುದು. ವಿಧವೆಯ ಕೈಗೆ ಕತ್ತಿಕೊಟ್ಟು ಅವಳನ್ನು ಮೂಲೆಯಲ್ಲಿ ಕುಳ್ಳಿರಿಸುವ ಸಂಪ್ರದಾಯವಿದೆ. ಮದುವೆಯಾಗುವ ವಿಧುರನಿಗೆ ಹೆಣ್ಣು, ರೂಮಾಲು ಮತ್ತು ಬಟ್ಟೆಕೊಡುವಳು. ಇವನು ಹೊಸ ಬಟ್ಟೆಧರಿಸಿ ಕತ್ತಿಯನ್ನು ಕೈಯಲ್ಲಿ ಹಿಡಿದು ಬೇರೊಂದು ಮೂಲೆಯಲ್ಲಿ ಕುಳಿತುಕೊಳ್ಳುವನು. ವಿಧುರನು ವಿಧವೆಗೆ ಸೀರೆ, ಕುಪ್ಪಸ ಕೊಡುತ್ತಾನೆ. ಮೂರು ದಿವಸ ಅವಳು ಒಂದು ಕೋಣೆಯಲ್ಲಿ ಅಡಗಿ ಕುಳಿತಿರುತ್ತಾಳೆ. ಕೆಲವು ಪ್ರದೇಶಗಳಲ್ಲಿ ವಿಧವೆಯರ ಮದುವೆಯನ್ನು ವಿಧವೆಯರ ಮನೆಯಲ್ಲಿಯೇ ಮಾಡುವ ಸಂಪ್ರದಾಯವಿದೆ. ಇಲ್ಲಿಯೂ ಸಹ ವಿಧುರನಾದವನು ಮದುವೆಯಾಗಬೇಕಾದರೆ ಎಂಟು ರೂಪಾಯಿ ತೆರ ಕೊಡುವನು.

**ಇಲ್ಲಿಗರಲ್ಲಿ ಕೂಡಿಕೆ**

ಇಲ್ಲಿಗರಲ್ಲಿ ಗಂಡಸತ್ತ ಪ್ರಾಯವಿರುವ ಹೆಂಡತಿ, ಹೆಂಡತಿಯನ್ನು ಕಳೆದುಕೊಂಡ ಗಂಡ ಕೂಡಿಕೆ ಮಾಡಿಕೊಳ್ಳುವುದು ಒಂದು ರೀತಿಯಾದರೆ, ಇನ್ನೊಂದು ಬಗೆ ಗಂಡನಿಲ್ಲದ ಹೆಂಡತಿ ನಾನಾ ಕಾರಣಕ್ಕೆ

ಹೊಂದಾಣಿಕೆಯಿಲ್ಲದ ಸಂಸಾರ, ನಡತೆ ಕೆಟ್ಟ ಪತ್ನಿ, ಲೈಂಗಿಕ ತೃಪ್ತಿ ಕೊಡದ ಹೆಂಡತಿ ಹೀಗೆ ಗಂಡನಿಂದ ಬಹಿಷ್ಕೃತಳಾಗಿದ್ದು, ಮಾನಸಿಕ, ಶಾರೀರಿಕ ಧರ್ಮಕ್ಕನುಗುಣವಾಗಿ ಬೇರೊಬ್ಬ ಗಂಡನನ್ನು ಒಲಿದು ಕೂಡುವುದು ಕೂಡಿಕೆಯಾಗುತ್ತದೆ.

ಕೂಡಿಕೆ ಮಾಡಿಕೊಳ್ಳುವಾತನ ಹೆಂಡತಿ ಸತ್ತಿದ್ದರೆ, ಆಕೆಗೆ ಸಂಬಂಧಿಸಿದ ವಸ್ತು-ವಸ್ತ್ರ-ಒಡವೆಗಳನ್ನು ಕೂಡಿಕೆ ಹೆಂಡತಿಗೆ ಕೊಡುತ್ತಾನೆ. ವಿಧವೆಯಾದ ಹೆಂಗಸಿಗೆ ಈಗಾಗಲೇ ಮಕ್ಕಳಿದ್ದರೆ ಅವರಿಗೆ ಸತ್ತ ಗಂಡನ ಆಸ್ತಿಯೂ ಬರುತ್ತದೆ. ಕೂಡಿಕೆಯಾದ ಗಂಡನು ತನ್ನ ಕೂಡಿಕೆ ಹೆಂಡತಿಗೆ ಈ ಮೊದಲೇ ಹುಟ್ಟಿದ ಮಕ್ಕಳನ್ನು ತಾನೇ ನೋಡಿಕೊಳ್ಳುವನು.

**ಬಂಟರ ಜಾತಿಯಲ್ಲಿ ಉಡಿಕೆ**

ಇವರಲ್ಲಿ ಉಡಿಕೆಗೆ "ಬುಡುವಳಿಕೆ ಮದುವೆ" ಎನ್ನುತ್ತಾರೆ. ಇದು ಹೆಣ್ಣಿನ ಮನೆಯಲ್ಲಿ ರಾತ್ರಿ ನಡೆಯುವುದು. ಗಂಡು ಹೆಣ್ಣಿಗೆ ಸೀರೆ, ರವಿಕೆ ಕೊಡುವನು. ಹೆಣ್ಣು ಗಂಡಿನ ನಡುವೆ ಒಂದು ಬಟ್ಟೆ ಹಿಡಿಯುತ್ತಾರೆ. ಆದರೆ ತೆರೆಯ ಕೆಳಗಿನಿಂದ ಗಂಡು ಹೆಣ್ಣಿನ ಕೈಹಿಡಿದರೆ ಲಗ್ನ ಮುಗಿಯಿತು. ಊಟದ ನಂತರ ಗಂಡ ಹೆಂಡತಿಯನ್ನು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ.

**ಆದಿವಾಸಿ ಜನಾಂಗದಲ್ಲಿ ಉಡಿಕೆ**

ವಿಧವೆಯನ್ನು ಮದುವೆಯಾಗಬೇಕಾದರೆ ಮೊದಲು ಶಮಿ ಅಥವಾ ರೂಯಿ ಮರವನ್ನು ಮದುವೆಯಾಗಬೇಕು. ನಂತರ ವಿಧವೆಗೆ ತಾಳಿಕಟ್ಟುವರು. ಇನ್ನು ಕೆಲವು ಜಾತಿಗಳಲ್ಲಿ ಉಡುಕಿಯನ್ನು ಅಡವಿಯಲ್ಲಿ ಒಂದು ಮಾವಿನಮರದ ಕೆಳಗೆ ಸೂರ್ಯಮುಳುಗಿದ ನಂತರ ಉಡಿಕೆ ಹಚ್ಚುವರು. ಹೊಸ ಬಟ್ಟೆ ಉಟ್ಟುಕೊಳ್ಳದೆ ಉಟ್ಟ ಬಟ್ಟೆಯ ಮೇಲೆ ಕಂಬಳಿಯನ್ನು ಹಾಸಿ ಅದರ ಮೇಲೆ ಗಂಡು-ಹೆಣ್ಣು ಕುಳಿತುಕೊಳ್ಳುವರು. ಜಂಗಮ ಅಥವಾ ವಿಧುರ ಹೆಣ್ಣಿಗೆ ತಾಳಿ ಕಟ್ಟುವರು. ಸೆರಗಿಗೂ ಶೆಲ್ಲೆಕ್ಕೂ ಗಂಟು ಹಾಕಿದ ಮೇಲೆ ಗಂಡ ಹೆಂಡತಿಗೆ, ಹೆಂಡತಿ ಗಂಡನಿಗೆ ಅಕ್ಷತೆ ಹಾಕುವರು. ಊರಿಗೆ ಬಂದು ನೇರವಾಗಿ ಹನುಮಾನ ದೇವರಿಗೆ ಹೋಗಿ ಕಾಯಿ ಕರ್ಪೂರ ಮಾಡುವರು. ಇತ್ತೀಚೆಗೆ ಉಡಿಕೆ ಪದ್ಧತಿಯಲ್ಲಿ ಹೊಸ ಆಚರಣೆಗಳು ಆಗಿವೆ. ಉಡಿಕೆ ಸಮಾರಂಭ ನೇರವೇರುವ ದಿವಸ ಮನೆಯಲ್ಲಿ ವರದಾಶಂಕರ ಪೂಜೆ ಮಾಡಿ, ಉಡಿಕೆಯಾಗಲಿರುವ ಹೆಣ್ಣು ಮತ್ತು ಗಂಡು ಪೂಜೆಗಾಗಿ ಮುಂದೆ ಕುಳಿತುಕೊಳ್ಳುವರು. ಪೂಜೆ ಮುಗಿದ ಮೇಲೆ ಸ್ವಾಮಿ ಗಂಡಿನ ಕೈಯಲ್ಲೊಂದು, ಹೆಣ್ಣಿನ ಕೈಯಲ್ಲೊಂದು ಹೂವಿನ ಹಾರಕೊಡುವರು. ಅವರು ಒಬ್ಬರಿಗೊಬ್ಬರು ಹಾಕುವರು. ಇದು ಹಗಲಿನಲ್ಲಿಯೇ ನಡೆಯುವುದು. ಉಡಿಕೆ ಮಾಡಿಕೊಂಡವರಿಗೆ ಮುತ್ತೈದೆತನ ಉಳಿಯುವುದಿಲ್ಲ. ಮಂಗಳ ಕಾರ್ಯದಲ್ಲಿ ಯಾವುದೇ ಚಾಜೂ ಇವರಿಗೆ ಇರುವುದಿಲ್ಲ.

ಹುಡುಗಿಯೂ ಕನ್ಯೆಯಾಗಿದ್ದು ಗಂಡನು ವಿಧುರನಾಗಿದ್ದರೆ ಇವರಿಬ್ಬರಿಗೂ ಚಾಜೂ ಬರುವುದು ಮತ್ತು ಮುತ್ತೈದೆತನ ಉಳಿಯುವುದು. ಅದೇ ರೀತಿ ಹುಡುಗನು ವಿಧವೆಯನ್ನು ಮದುವೆಯಾದರೆ ಅವರು ಯಾವುದೇ ಚಾಜಿಗೆ ಬರುವುದಿಲ್ಲ ಮತ್ತು ಮುತ್ತೈದೆತನವು ಉಳಿಯುವುದಿಲ್ಲ. ಉಡಿಕೆ ಅಮಂಗಳಕರ ವಾದುದೆಂದು ಅದನ್ನು ಯಾರು ನೋಡಬಾರದೆಂದು ರಾತ್ರಿ ಹೊತ್ತಿನಲ್ಲಿ ಮಾಡುವರು. ಇಂತಹ ಮದುವೆಗಳು ಮಠ, ಕಲ್ಯಾಣ ಮಂಟಪ, ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ನಡೆಯುವುದಿಲ್ಲ. ಇವರ ಮದುವೆಯಲ್ಲಿ ಅಕ್ಷತೆಯನ್ನು ಜೋಳದಿಂದ ಮಾಡಿರುವುದಿಲ್ಲ. ಕೇವಲ ಅಕ್ಕಿಯಿಂದ ಮಾಡಿರುತ್ತಾರೆ. ಬಾಲ್ಯವಿವಾಹವಾಗಿದ್ದು, ಹುಡುಗಿಯು ಮೈನೆರೆಯುವುದಕ್ಕಿಂತ ಮುಂಚೆ ಗಂಡ ಸತ್ತರೆ ಉಡಿಕೆ ಮಾಡುವುದಿಲ್ಲ. ಆದರೆ ಮರುಮದುವೆ ಮಾಡುತ್ತಾರೆ. ಮೊದಲಿನ ಗಂಡನ ಮನೆಗೆ ನಡೆಯಲು ಹೋದರೆ, ಅವನಿಂದ ಮಗುವಾಗಿ ಸಂಬಂಧ ಮುರಿದರೆ ಅಥವಾ ಗಂಡ 'ಸತ್ತರೆ ಉಡಿಕೆ ಹಚ್ಚುವರು' ಈಗ ವಿದ್ಯಾವಂತರು ಉಡಿಕೆ ಬದಲಾಗಿ ಮರುಮದುವೆ ಮಾಡಿಕೊಳ್ಳುತ್ತಿದ್ದಾರೆ. ಹಳ್ಳಿಗಳಲ್ಲಿ ಮಾತ್ರ ಉಡಿಕೆ ಎನ್ನುವ ಪದವನ್ನು ಉಪಯೋಗಿಸುವರು ಹೊರತಾಗಿ ಪಟ್ಟಣಗಳಲ್ಲಿ ಇದನ್ನು ಮರುಮದುವೆ ಎನ್ನುವರು.

### ಇಸ್ಲಾಂ ಧರ್ಮ

ಇಸ್ಲಾಂ ಧರ್ಮದಲ್ಲಿ ವಂಶವನ್ನು ಮೊದಲು ಮಾತೃ ಮೂಲದಿಂದ ಗುರುತಿಸಲ್ಪಡುತ್ತಿದ್ದರು. ಆದರೆ ಕಾಲ ಕ್ರಮೇಣ ವಂಶಾವಳಿಯನ್ನು ಪಿತೃ ಮೂಲದಿಂದ ಗುರುತಿಸಲು ಪ್ರಾರಂಭಿಸಿದರು. ಜೊತೆಗೆ ಆಸ್ತಿಯ ಹಕ್ಕನ್ನು ಸಹ ಗಂಡುಸಂತಾನಕ್ಕೆ ಸೀಮಿತಗೊಳಿಸಿದರು. ಏಕಸಂಗಾತಿಯ ವಿವಾಹವನ್ನು ಸ್ತ್ರೀಯರು ಮಾತ್ರ ಪಾಲಿಸಬೇಕಾಯಿತು. ಆದರೆ ಪುರುಷನಾದವನು ಏಕಕಾಲದಲ್ಲಿ ನಾಲ್ಕು ಜನರೊಡನೆ ವಿವಾಹ ಮಾಡಿಕೊಳ್ಳ ಬಹುದಿತ್ತು. ಈ ರೀತಿಸಮಾಜದಲ್ಲಿ ಸ್ತ್ರೀಯರಿಗೆ ಉನ್ನತವಾದ ಸ್ಥಾನವನ್ನು ನೀಡದೆ ಅವಳಿಗೆ ಎಲ್ಲಾ ಹಕ್ಕುಗಳಿಂದ ವಂಚಿತರನ್ನಾಗಿ ಮಾಡಿದರು. ಇಸ್ಲಾಂ ಧರ್ಮಗ್ರಂಥವಾದ ಖುರಾನನಲ್ಲಿಯೂ ಸಹ ಮಹಿಳೆಯರನ್ನು ಹೀನಾಯವಾಗಿ ಕಾಣಲಾಗಿದೆ. ಸ್ತ್ರೀಯರನ್ನು ಕೇವಲ ಭೋಗದ ವಸ್ತುವೆಂದು ತಿಳಿದು ಅವಳನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿದ್ದರು. ಸಮಾಜದಲ್ಲಿ ಅವಳನ್ನು ಎಲ್ಲ ಮಾನವೀಯ ಹಕ್ಕುಗಳಿಂದ ವಂಚಿಸಲಾಗಿದೆ. ಅವಳಿಗೆ ಸ್ವತಂತ್ರ್ಯವಾಗಿ ಜೀವಿಸುವ ಅಧಿಕಾರವು ಇರಲಿಲ್ಲ. ಎಲ್ಲ ರೀತಿಯಿಂದ ಅವಳು ಅನ್ಯಾಯಕ್ಕೆ ಒಳಗಾಗಿದ್ದಾಳೆ. ಗಂಡನ ಮನೆಯಲ್ಲಿ ಅವನ ಕೃಪಾಕಟಾಕ್ಷಕ್ಕೆ ಬೇರುಬಿದ್ದು ತವರು ಮನೆಯಲ್ಲಿ ತಂದೆ ಮತ್ತು ಸೋದರರ ಕೃಪಾಶೀಲರಾಗಬೇಕಿತ್ತು. ದಾಂಪತ್ಯ ಬಂಧನಕ್ಕೊಳಗಾದ ಬಳಿಕ ಪತಿಯಿಂದ ವಿಮುಕ್ತ ಹೊಂದುವ ಹಕ್ಕು ಸಹ ಅವಳಿಗಿರಲಿಲ್ಲ. ಸ್ತ್ರೀಯರನ್ನು ಸೇವೆಗಾಗಿ ಇರಿಸಿಕೊಳ್ಳುತ್ತಿದ್ದರು. ಪುರುಷನಿಗೆ ಇಷ್ಟಬಂದಂತೆ ವಿವಾಹವಾಗುವುದು ಮತ್ತು ವಿಚ್ಛೇದನೆಯನ್ನು ನೀಡುವ ಅಧಿಕಾರವಿತ್ತು.

ಪುರುಷರು ಸ್ತ್ರೀಯರು ಸುಂದರವಾಗಿರುವುದರಿಂದ ಅವರ ಮೇಲೆ ಕಾಮುಕ ದೃಷ್ಟಿ ಹರಿಸುತ್ತಿದ್ದರು. ಈ ರೀತಿಯ ಕಾಮುಕ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಸ್ತ್ರೀಯರು ತಮ್ಮ ಮಾನರಕ್ಷಣೆಗಾಗಿ ಮುಖಕಾಣಿಸದಂತೆ ಮುಖಕ್ಕೆ ಬಟ್ಟೆ ಕಟ್ಟಿಕೊಳ್ಳಲು ಪ್ರಾರಂಭಿಸಿದರು. ಇದರಿಂದ ಪರದಾ ಧರಿಸುವುದು ಅನಿವಾರ್ಯವಾಯಿತು. ಈ ರೀತಿ ಮಹಿಳೆಯರು ಪರದಾ ಧರಿಸುವುದರಿಂದ ಮಹಿಳೆಯರು ಶಿಕ್ಷಣದಿಂದ ವಂಚಿತರಾದರು. ಅಲ್ಲದೆ ಸಾರ್ವಜನಿಕ ಜೀವನ ಮತ್ತು ಮುಕ್ತ ಜೀವನಕ್ಕೆ ಅಡ್ಡಿಯಾಗಿ ಅವರ ಪ್ರಗತಿ ಮತ್ತಷ್ಟು ಕುಂಠಿತವಾಗಿ ಅವರು ಶೋಷಣೆಗೆ ಒಳಗಾಗಲು ಪ್ರಾರಂಭಿಸಿದರು. ಶ್ರೀಮಂತ ಮಹಿಳೆಯರು ಮಾತ್ರ ಶಿಕ್ಷಣವನ್ನು ಪಡೆಯುತ್ತಿದ್ದರು. ದೆಹಲಿಯ ಸುಲ್ತಾನರ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನ ಕೆಳಮಟ್ಟದ್ದಾಗಿತ್ತು. ಸ್ತ್ರೀಯರಿಗೆ ಪುರುಷರಿಗಿರುವಷ್ಟು ಸ್ವಾತಂತ್ರ್ಯವಿರಲಿಲ್ಲ. ಸ್ತ್ರೀಯರು ಸಾಮಾಜಿಕ ರಂಗಗಳಲ್ಲಿ ಬಹಿರಂಗವಾಗಿ ಪಾಲ್ಗೊಳ್ಳುತ್ತಿರಲಿಲ್ಲ. ಒಂದು ವೇಳೆ ಪಾಲ್ಗೊಳ್ಳುತ್ತಿದ್ದರು ಅವರಿಗೆ ಸರಿಯಾದ ರೀತಿಯಲ್ಲಿ ಅವಕಾಶವನ್ನು ನೀಡುತ್ತಿರಲಿಲ್ಲ. ಅವಳನ್ನು ಕೀಳಾಗಿ ಕಾಣಲು ಪ್ರಾರಂಭಿಸಿದರು. ಆದ್ದರಿಂದ ಮಹಿಳೆಯರು ಮನೆಯಲ್ಲಿಯೇ ನಾಲ್ಕು ಗೋಡೆಗಳ ಮಧ್ಯೆ ಜೀವನ ನಡೆಸಲು ಪ್ರಾರಂಭಿಸಿದರು.

ಸಾಮಾನ್ಯ ಮಹಿಳೆಯರೇ ಈ ರೀತಿ ಅಧಿಕಾರದಿಂದ ವಂಚಿತರಾಗಿರುವಾಗ ವಿಧವೆಯರ ಸ್ಥಿತಿ ಇನ್ನು ಶೋಚನೀಯವಾಗಿತ್ತು. ಇವಳಿಗೆ ಪತಿಯ ಮರಣದ ನಂತರ ಪತಿಯ ಆಸ್ತಿಯಲ್ಲಿ ಪಾಲುದೊರೆಯುವುದಿಲ್ಲ. ಕಾರಣ ಇಲ್ಲಿ ವಿಧವಾ ವಿವಾಹ ಪದ್ಧತಿಯು ಜಾರಿಯಲ್ಲಿತ್ತು. ವಯಸ್ಸಿನಲ್ಲಿ ಚಿಕ್ಕವಳಾದ ವಿಧವೆಯು ಪತಿಯ ಮರಣದ ನಂತರ ತೌರುಮನೆಯನ್ನು ಸೇರಿ ಮತ್ತೊಂದು ಮದುವೆಯನ್ನು ಮಾಡಿಕೊಳ್ಳುತ್ತಿದ್ದಳು. ಒಂದು ವೇಳೇ ಅವಳಿಗೆ ಮಕ್ಕಳಿದ್ದರೆ ಆ ಮಕ್ಕಳ ಜವಾಬ್ದಾರಿಯನ್ನು ಗಂಡನ ಮನೆಯವರೆ ನೋಡಿ ಕೊಳ್ಳುತ್ತಿದ್ದರು. ವಿಧವೆಯು ಒಂದು ವೇಳೆ ಮದುವೆಯಾಗದೇ ಹಾಗೆಯೇ ಉಳಿದರೆ ಅವಳು ಜೀವಿತದ ವರೆಗೆ ಅವಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು, ಹೊರತಾಗಿ ಆಸ್ತಿಯಲ್ಲಿ ಹಕ್ಕನ್ನು ಕೊಡುತ್ತಿ ರಲಿಲ್ಲ. ಪತಿಯ ಆಸ್ತಿಯು ದೊರೆಯುತ್ತಿರಲಿಲ್ಲ. ಇತ್ತ ತಂದೆಯ ಆಸ್ತಿಯಲ್ಲೂ ಸಹ ಅವಳಿಗೆ ಪಾಲು ದೊರೆಯುತ್ತಿರಲಿಲ್ಲ. ಇದರಿಂದ ಅವಳು ಒಂದು ರೀತಿಯ ಅತಂತ್ರಜೀವನವನ್ನು ನಡೆಸುತ್ತಿದ್ದಳು. ಇಸ್ಲಾಂರಲ್ಲಿ ಹೆಣ್ಣು ಮಗುವಿನ ಜನನವೇ ಶೋಕದಾಯಕವಾಗಿತ್ತು. ಏಕೆಂದರೆ ಮಗಳಿಗಾಗಿ ಅಳಿಯನನ್ನು ಸ್ವೀಕರಿಸುವುದು ತಮ್ಮ ಕುಟುಂಬದ ಪ್ರತಿಷ್ಟೆಗೆ ಕಳಂಕವೆಂದು ಅವರು ತಿಳಿದಿದ್ದರು. ಗಂಡು ಮಗುವಾದರೆ ಸದಾ ತಮ್ಮೊಂದಿಗೆ ಇರುವನು. ದೊಡ್ಡವನಾದ ಮೇಲೆ ದುಡಿದು ಸಂಪಾದನೆ ತರುವನು. ಯುದ್ಧದ ಸಮಯದಲ್ಲಿ ಶತ್ರುಗಳೊಂದಿಗೆ ಹೋರಾಡಿ ತಮ್ಮ ಪ್ರಾಣ ರಕ್ಷಣೆ ಮಾಡಬಲ್ಲ, ಅಲ್ಲದೆ ವೃದ್ಧರಾದ ಮೇಲೆ ತಮ್ಮ ಸೇವೆ ಮಾಡುವನು ಎಂದು. ಆದರೆ ಹೆಣ್ಣು ಮಗು ಹುಟ್ಟಿದರೆ ತಮ್ಮ ಖಜಾನೆ ಬರಿದಾಗುವುದು ಎಂದು ತಿಳಿದಿದ್ದರು. ಈ ರೀತಿ ಮಾಡುವುದರಿಂದ ವಿಧವೆಯರಿಗೆ ಆಸ್ತಿ ದೊರೆಯುತ್ತಿರಲಿಲ್ಲ.

ಪ್ರವಾದಿ ಮಹಮ್ಮದನ ಕಾಲದಲ್ಲಿ ಮಹಿಳೆಯ ಸ್ಥಿತಿಯು ಸುಧಾರಿಸಿತು. ಅವಳನ್ನು ಒಬ್ಬ ಮಾನವ ಜೀವಿ, ಸಮಾಜದ ಒಬ್ಬ ಸದಸ್ಯೆ ಎಂದು ಗೌರವಿಸಲ್ಪಟ್ಟು ಅವಳಿಗೆ ಯೋಗ್ಯ ಸ್ಥಾನಮಾನ ನೀಡಲು ಪ್ರಾರಂಭಿಸಿದರು. ಇಸ್ಲಾಂರಲ್ಲಿ ವಿವಾಹವು ಒಂದು ಸಂಸ್ಕಾರವಾಗದೆ ಒಂದು ಒಪ್ಪಂದವಾಗಿದೆ. ಇಸ್ಲಾಂರಲ್ಲಿ ಪುರುಷನಾದವನು ಕೇವಲ ಮೂರು ಬಾರಿ ತಲಾಕ್ ಎಂದು ಹೇಳಿದರೆ ಸಾಕು ವಿವಾಹ ವಿಚ್ಛೇದನವಾಗುತ್ತಿತ್ತು. ಆದುದರಿಂದ ಪತ್ನಿಯು ಅತಿ ಎಚ್ಚರದಿಂದ ಎಲ್ಲ ಕಾರ್ಯಗಳನ್ನು ನೆರವೇರಿಸುತ್ತಿದ್ದಳು. ಪತಿಯಿಂದ ಅವಳು ಹಿಂಸೆಯನ್ನು ಅನುಭವಿಸಿದ್ದರು ಅದಕ್ಕೆ ರಕ್ಷಣೆಯನ್ನು ಪಡೆಯಬಹುದಾಗಿತ್ತು. ವಿಚ್ಛೇದನದ ಹಕ್ಕು ಮಹಿಳೆಯು ಹೊಂದಿದ್ದಳು. ವಿಚ್ಛೇದನೆಯ ಹಕ್ಕಿನ ಜೊತೆಗೆ ದತ್ತು ಸ್ವೀಕಾರವನ್ನು ಪಡೆಯಬಹುದಾಗಿತ್ತು. ತನಗೆ ಗಂಡು ಸಂತಾನವಿಲ್ಲದಿದ್ದರೆ ಗಂಡು ಮಗುವನ್ನು ದತ್ತು ಪಡೆಯಬಹುದಾಗಿತ್ತು. ಒಂದು ವೇಳೆ ದತ್ತುಪುತ್ರನನ್ನು ಪಡೆಯುವ ಇಚ್ಛೇ ಇಲ್ಲದಿದ್ದರೆ ತನ್ನ ಹೆಣ್ಣು ಮಕ್ಕಳಿಗೆ ಆಸ್ತಿಯನ್ನು ಹಂಚಬಹುದಾಗಿತ್ತು. ಆದರೆ ಆ ಆಸ್ತಿಯ ಮೇಲೆ ಅವಳ ಗಂಡನ ಅಧಿಕಾರವಿರುತ್ತಿರಲಿಲ್ಲ. ಆಕೆ ತನಗೆ ಬೇಕಾದವರಿಗೆ ಆಸ್ತಿಯನ್ನು ವರ್ಗಾಯಿಸಬಹುದಾಗಿತ್ತು.

ಶೇರಶಹ ಹಾಗೂ ಅಕ್ಬರನ ಕಾಲದಲ್ಲಿ ಸ್ತ್ರೀಯರು ಶಿಕ್ಷಣವನ್ನು ಪಡೆಯಲು ಪ್ರಾರಂಭಿಸಿದರು. ಇವರ ಕಾಲದಲ್ಲಿ ಸ್ತ್ರೀಯರನ್ನು ಕಾಮುಕ ದೃಷ್ಟಿಯಿಂದ ಪುರುಷನು ನೋಡಿದರೆ ಅವನು ಶಿಕ್ಷೆಗೆ ಗುರಿಯಾಗುತ್ತಿದ್ದನು. ಅಕ್ಬರನು ಶಿಕ್ಷಣ ಮತ್ತು ಸಾಹಿತ್ಯ ಪೋಷಕನಾಗಿದ್ದನು. ಆದ್ದರಿಂದಲೇ ಸ್ತ್ರೀಯ ಶೀಕ್ಷಣಕ್ಕೆ ಪ್ರೋತ್ಸಾಹ ನೀಡಿದನು. ಪರದಾ ಪದ್ಧತಿಯಿಂದಾಗಿ ರಾಜಕುಟುಂಬದ ಮತ್ತು ಸರದಾರರ ಹೆಣ್ಣು ಮಕ್ಕಳು ಮನೆಯಲ್ಲಿಯೇ ಶಿಕ್ಷಣವನ್ನು ಪಡೆಯುತ್ತಿದ್ದರು. ಈ ರೀತಿ ಪರದಾ ಪದ್ಧತಿ ಇರುವುದರಿಂದ ಬಾಲಕೀಯರಿಗೆ ಪ್ರತ್ಯೇಕವಾದ ಶಾಲೆಗಳನ್ನು ಸ್ಥಾಪಿಸಿದರು. ಇದರಿಂದ ಮಹಿಳೆಯರು ಶಿಕ್ಷಣವನ್ನು ಪಡೆದರು. ಒಟ್ಟಾರೆಯಾಗಿ ಮಹಿಳೆಯ ಸ್ಥಿತಿಗತಿಗಳು ಪ್ರವಾದಿ ಮಹಮದ್‌ನ ಕಾಲದಿಂದ ಸ್ವಲ್ಪಮಟ್ಟಿಗೆ ಸುಧಾರಿಸಿವೆ. ಆದರೆ ಧರ್ಮವು ಹೇರಿದ ನಿಯಮಗಳನ್ನು ಚಾಚುತಪ್ಪದೇ ಆಚರಿಸಬೇಕಾಗಿದೆ. ಇಸ್ಲಾಂ ಮಹಿಳೆಯು ಪತಿಯ ಮರಣದ ನಂತರ ಹಿಂದೂ ಮಹಿಳೆಯರ ಹಾಗೆ ಬಿಳಿಯ ಉಡುಪನ್ನು ಧರಿಸುವಳು ತಾಳಿ, ಕಾಲುಂಗುರ, ಬಳೆಗಳನ್ನು, ಮೂಗುತಿ, ಕಿವಿಯೊಲೆಯನ್ನು ತೆಗೆಯುವಳು. ಆದರೆ ಮರುವಿವಾಹವಾಗುವ ಅವಕಾಶವಿರುವುದರಿಂದ, ಇವಳು ಹಿಂದೂ ಮಹಿಳೆಯರಷ್ಟು ತೊಂದರೆ ಅನುಭವಿಸುತ್ತಿಲ್ಲ.

### ಕ್ರೈಸ್ತ ಧರ್ಮ

ಹಿಂದೂ ಧರ್ಮದಲ್ಲಿಯರವಂತೆಯೇ ಕ್ರೈಸ್ತ ಧರ್ಮದಲ್ಲೂ ಸಹ ವಿವಾಹವು ಒಂದು ಸಂಸ್ಕಾರವಾಗಿದೆ. ಇದೊಂದು ಪವಿತ್ರ ಬಂಧನವಾಗಿದೆ. ಕ್ರೈಸ್ತ ಧರ್ಮದಲ್ಲಿ ವಿವಾಹದ ಸಮಯದಲ್ಲಿ ಹಿಂದೂ ಧರ್ಮದವರ ಹಾಗೆ ತಾಳಿಯನ್ನು ಕಟ್ಟುವುದಿಲ್ಲ. ಆದರೆ ಬೆರಳಿಗೆ ಉಂಗುರವನ್ನು ತೊಡಿಸುವರು. ಭಾರತದಲ್ಲಿ ಹಿಂದೂ

ಹಾಗೂ ಮುಸ್ಲಿಂ ಮಹಿಳೆಯರ ಅಂತಸ್ತಿನೊಂದಿಗೆ ಹೋಲಿಸಿ ನೋಡಿದಾಗ ಭಾರತೀಯ ಕ್ರೈಸ್ತ ಮಹಿಳೆಯರು ಉತ್ತಮವಾದ ಸ್ಥಿತಿಯಲ್ಲಿದ್ದಾರೆ. ಇವರು ಪಾಶ್ಚಿಮಾತ್ಯರ ಪ್ರಭಾವದಿಂದ ಮುಂದುವರೆದಿದ್ದಾರೆ. ಈ ಧರ್ಮದಲ್ಲಿ ಪುರುಷರಿಗೆ ನೀಡಲಾದ ಎಲ್ಲಾ ಹಕ್ಕುಗಳನ್ನು ಕ್ರೈಸ್ತ ಮಹಿಳೆಯರಿಗೆ ಸಮನಾಗಿ ನೀಡಲಾಗಿದೆ. ಈ ಸಮಾನತೆಯ ತತ್ವಗಳನ್ನು ಕ್ರೈಸ್ತ ಧರ್ಮ ಗ್ರಂಥವಾದ ಬೈಬಲ ಕೂಡ ಹೇಳುವುದು.

ಕ್ರೈಸ್ತ ಮಹಿಳೆಯರಲ್ಲಿ ಬಾಲ್ಯವಿವಾಹ ಪದ್ಧತಿಯು ಇರಲಿಲ. ಬಾಲ್ಯವಿವಾಹ ಪದ್ಧತಿಯನ್ನು ಬೈಬಲ ಕೂಡ ಖಂಡಿಸುತ್ತದೆ. ಕ್ರೈಸ್ತ ಮಹಿಳೆಯರು ಪ್ರಾಯಕ್ಕೆ ಬಂದ ನಂತರ ಅವಳು ತನಗೆ ಇಷ್ಟವಾದ ವರನನ್ನು ಆಯ್ಕೆಮಾಡಿ ವಿವಾಹವಾಗುವ ಹಕ್ಕನ್ನು ಹೊಂದಿದ್ದಳು. ಇಲ್ಲಿ ವರನನ್ನು ಆಯ್ಕೆ ಮಾಡುವ ಹಕ್ಕನ್ನು ಹೆಣ್ಣು ಪಡೆದಿದ್ದಾಳೆ. ಆದ್ದರಿಂದ ಅವಳ ಇಚ್ಛೆಯ ವಿರುದ್ಧ ವಿವಾಹವನ್ನು ಚರ್ಚಿನ ಪುರೋಹಿತರು(ಪಾದ್ರಿ) ಕೂಡ ಒಪ್ಪಿಗೆ ಕೊಡುವುದಿಲ್ಲ. ವಿಚ್ಛೇದನೆಯನ್ನು ಪಡೆಯುವ ಅಧಿಕಾರವನ್ನು ಹೊಂದಿದ್ದರು ಇಲ್ಲಿ ಪುರುಷನು ವಿಚ್ಛೇದನೆಯನ್ನು ಪಡೆಯಬಹುದಿತ್ತು. ಹಾಗೆಯೇ ಮಹಿಳೆಯೂ ಕೂಡ ವಿಚ್ಛೇದನೆಯನ್ನು ಪಡೆಯಬಹುದಾಗಿದೆ. ಇಲ್ಲಿಯ ಹೆಣ್ಣು ಮಕ್ಕಳು ಶಿಕ್ಷಣದಿಂದ ವಂಚಿತರಾಗದೆ, ಪುರುಷರ ಹಾಗೆ ಶಿಕ್ಷಣವನ್ನು ಪಡೆದಿದ್ದಾರೆ. ಇನ್ನು ಕೆಲವು ಮಹಿಳೆಯರು ಪುರುಷರಿಗೆ ಸರಿಸಮನಾಗಿ ಉದ್ಯೋಗವನ್ನು ಮಾಡುತ್ತಿದ್ದಾರೆ.

ಹಿಂದೂ ಧರ್ಮದಲ್ಲಿ ವರದಕ್ಷಿಣೆ ಪದ್ಧತಿಯು ಇದ್ದಹಾಗೆಯೇ ಈ ಧರ್ಮದಲ್ಲಿ ಇಲ್ಲ. ಕಾರಣ ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳಷ್ಟೇ ಕುಟುಂಬದ ಆಸ್ತಿಯಲ್ಲಿ ಪಾಲು ದೊರೆಯುವುದರಿಂದ ವರದಕ್ಷಿಣೆಯ ಪದ್ಧತಿಯೂ ಜಾರಿಯಲ್ಲಿಲ್ಲ. ಧರ್ಮಗ್ರಂಥಗಳು ಮತ್ತು ಪಾದ್ರಿಗಳು ಕ್ರೈಸ್ತ ಮಹಿಳೆಯರ ಮೇಲೆ ಯಾವುದೇ ರೀತಿಯ ನಿರ್ಬಂಧನೆಗಳನ್ನು ಹೇರಿರುವುದಿಲ್ಲ. ಅನೇಕ ಕ್ರೈಸ್ತ ಮಹಿಳೆಯರು ಮಿಶನರಿಗಳಾಗಿ ಧರ್ಮ ಪ್ರಸಾರ ಮಾಡುವ ಕಾರ್ಯವನ್ನು ಹೊಂದಿದ್ದಾರೆ. ವಿಧವೆಯರಾದವರಿಗೆ ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಯಾವುದೇ ನಿರ್ಬಂಧನೆಗಳಿಲ್ಲ. ಅವಳು ಸಹ ಸಾಮಾನ್ಯ ಮಹಿಳೆಯಂತೆ ಜೀವನ ನಡೆಸುವ ಅಧಿಕಾರವನ್ನು ಪಡೆದಿದ್ದಾಳೆ. ಹಿಂದೂ ಮಹಿಳೆಯ ಹಾಗೆ ಪಾತಿವ್ರತ್ಯದ ವೈಭವೀಕರಣಕ್ಕಾಗಿ ಸತಿ ಹೋಗುವುದು ಈ ಧರ್ಮದಲ್ಲಿಲ್ಲ. ಹಾಗೆಯೇ ವಿಧವೆಯಾದ ಮೇಲೆ ಕೇಶಮುಂಡನ ಮಾಡಿಕೊಳ್ಳುವುದು, ಒಪ್ಪತ್ತು ಊಟಮಾಡುವುದು ಇಲ್ಲ. ಅವರು ಮಿಶನರಿಗಳಾಗಿ ಧರ್ಮ ಪ್ರಸಾರ ಮಾಡಬಹುದಾಗಿದೆ. ಕ್ರೈಸ್ತ ಮಹಿಳೆಯರಿಗೆ ಕುಟುಂಬದಲ್ಲಿ ಗೌರವದ ಸ್ಥಾನವಿದೆ. ಇವಳು ಕುಟುಂಬದಲ್ಲಿ ಎರಡನೆ ದರ್ಜೆಯ ಪ್ರಜೆಯಾಗಿರದೆ ಪುರುಷನಂತೆ ಮನೆಯ ಜವಾಬ್ದಾರಿಯನ್ನು ಹೊರುವುದರ ಜೊತೆಗೆ ಉದ್ಯೋಗವನ್ನು ಮಾಡುವ ಅವಕಾಶವಿದೆ. ವಿಧವೆಯಾದವಳಿಗೆ ಕುಟುಂಬದಲ್ಲಿ ಹಿಂದೂ ಧರ್ಮದಂತೆ ಅವಳನ್ನು ಅಮಂಗಲೇ, ಅಪಶಕುನ ಎಂದು ತಿಳಿಯುವುದಿಲ್ಲ. ವಿಧವೆಯಾದವಳು

ಎಲ್ಲಾ ಧಾರ್ಮಿಕ ಕಾರ್ಯಗಳಲ್ಲಿ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ಪಾಲ್ಗೊಳ್ಳಬಹುದು. ಪತಿಯು ಮರಣ ಹೊಂದಿದ ನಂತರ ಆತನ ಆಸ್ತಿಯ ಮೇಲೆ ಪತ್ನಿಯಾದವಳು ಪೂರ್ಣ ಅಧಿಕಾರವನ್ನು ಹೊಂದಿರುವಳು. ವಿಧವೆಯಾದವಳು ಪುನರ್ವಿವಾಹವಾಗಲು ಅಧಿಕಾರವನ್ನು ಹೊಂದಿದ್ದಾಳೆ. ಆದರೆ ವಿಧವೆ ಅಥವಾ ವಿಧುರ ಮರುಮದುವೆಯಾಗ ಬೇಕಾದರೆ ಚರ್ಚಿನ ಒಪ್ಪಿಗೆಯನ್ನು ಪಡೆಯಬೇಕಾಗುವುದು. ಕ್ರೈಸ್ತ ಧರ್ಮದಲ್ಲಿ ಪತಿಯು ತೀರಿದರೆ ಶೋಕ ಆಚರಿಸಲು ಆಕೆ ಕಪ್ಪು ಉಡುಪನ್ನು ಧರಿಸುವಳು. ಮದುವೆಯ ಸಮಯದಲ್ಲಿ ತೊಡಿಸಿದ ಉಂಗುರವನ್ನು ತೆಗೆಯುವರು. ಇವರು ಮರುವಿವಾಹವಾದರು ಸಹ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನಗಳಿವೆ. ಸಮಾಜ ಇವರನ್ನು ಹೀನಾಯವಾಗಿ ಕಾಣುವುದಿಲ್ಲ. ಆದರೆ ಹಿಂದೂ ಮಹಿಳೆಯರಷ್ಟು ಹೀನಾಯವಾದ ಸ್ಥಿತಿಯನ್ನು ಕ್ರೈಸ್ತ ಮಹಿಳೆಯು ಅನುಭವಿಸುವುದಿಲ್ಲ. ಹಾಗೆಯೇ ಹಿಂದೂ ಮಹಿಳೆಯು ಆಚರಿಸುತ್ತಿದ್ದ ವೈಧವ್ಯದ ಕಠೋರ ಆಚರಣೆಗಳು ಸಹ ಈ ಧರ್ಮದ ಮಹಿಳೆಯರು ಅನುಭವಿಸುತ್ತಿಲ್ಲ. ಹಿಂದೂ ಮಹಿಳೆಯರಿಗಿಂತ ಉತ್ತಮವಾದ ಜೀವನವನ್ನು ನಡೆಸುತ್ತಲಿದ್ದಾರೆ.

ಒಟ್ಟಾರೆಯಾಗಿ ಆಯಾ ಧರ್ಮಗಳಿಗೆ ಅನುಗುಣವಾಗಿ ಮಹಿಳೆಯರ ಸ್ಥಾನಮಾನ, ವೈಧವ್ಯದ ಆಚರಣೆಗಳು ಇವೆ. ಎಲ್ಲಾ ಧರ್ಮದಲ್ಲಿಯೂ ಸಹ ವಿಧವೆಯಾದವಳು ಹಿಂಸೆಯನ್ನು ಅನುಭವಿಸುತ್ತಿದ್ದಾರೆ. ಆದರೆ ಹಿಂಸೆಯ ಸ್ವರೂಪಗಳು ಬೇರೆ ಬೇರೆ ರೀತಿಯಲ್ಲಿವೆ. ಬೌದ್ಧ ಧರ್ಮ, ಮುಸ್ಲಿಂ ಧರ್ಮ, ಕ್ರೈಸ್ತ ಧರ್ಮದ ಮಹಿಳೆಯರಿಗಿಂತಲೂ ಹಿಂದೂ ಧರ್ಮದ ಮಹಿಳೆಯರು ಅದರಲ್ಲೂ ಬ್ರಾಹ್ಮಣ ಮಹಿಳೆಯರು ಈ ವೈಧವ್ಯದಂಥಹ ಕ್ರೂರ ಆಚರಣೆಗಳಿಗೆ ಒಳಪಟ್ಟಿದ್ದಾಳೆ. ಕೆಳವರ್ಗ ಮತ್ತು ಕೆಳಜಾತಿಗಳಲ್ಲಿ ವಿಧವಾ ಮರುವಿವಾಹ ಇರುವುದರಿಂದ ಅಷ್ಟೊಂದು ಇವರು ತೊಂದರೆಯನ್ನು ಅನುಭವಿಸುತ್ತಿಲ್ಲ. ಮುಂದಿನ ಅಧ್ಯಾಯದಲ್ಲಿ ಇದುವರೆಗೆ ವಿಧವೆಯರಿಗಾಗಿ ನಡೆದುಬಂದ ಚಳುವಳಿಗಳು ಮತ್ತು ಸಂಘಸಂಸ್ಥೆಗಳು ಯಾವ ರೀತಿ ಸಹಾಯ ನೀಡುತ್ತವೆ ಎನ್ನುವುದನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಡಿ ಟಿಪ್ಪಣಿಗಳು**

೧. ಡಾ.ಜಿ.ಕೃಷ್ಣಪ್ಪ, ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ, ಶ್ರೀರಂಗ ಪ್ರಕಾಶನ, ಮೈಸೂರು ೨೦೦೧, ಪು.೧೩

೨. ಕೆ.ಭೈರಪ್ಪ, ಭಾರತೀಯ ಸಮಾಜ, ೧೯೯೪, ಪು.೪೮೪

೩. ಅದೇ, ಪು.೪೮೫

೪. ಅದೇ, ಪು.೪೮೬

೫. ಮಂಗಲಾಕಾಳೆ, ಸ್ತ್ರೀ ವಿಮೋಚನಾ ಹೋರಾಟಗಳು, ಅನಾರ್ಯ ಪ್ರಕಾಶನ, ಧಾರವಾಡ, ಪು.೧೩

೬. ಕೆ.ಭೈರಪ್ಪ, ಭಾರತೀಯ ಸಮಾಜ, ೧೯೯೪, ಪು.೪೮೮

೭. ಅದೇ, ಪು.೪೮೯

೮. ಮಂಗಲಾಕಾಳೆ, ಪೂರ್ವೋಕ್ತ ಪು.೨೫

೯. ಸರಸ್ವತೀ ರಿಸಬೂಡ(ಅನು), ಸ್ತ್ರೀ-ಪುರುಷ, ಮೂಲ: ಛಾಯಾದಾತಾರ, ಇಳಾ ಪ್ರಕಾಶನ, ಚಾಮರಾಜಪೇಟೆ, ಬೆಂಗಳೂರು, ಪು.೧೨೦

೧೦. ಮಂಗಲಾಕಾಳೆ, ಪೂರ್ವೋಕ್ತ, ಪು.೨೬

೧೧. ಅದೇ, ಪು.೨೭

೧೨. ಅದೇ, ಪು.೨೮

೧೩. ಗುಲಬರ್ಗಾ ವಿಶ್ವವಿದ್ಯಾಲಯ ಸಂಶೋಧನ ಪತ್ರಿಕೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ಡಿಸೆಂಬರ ೧೯೮೮, ಪು.೩೦

೧೪. ಅದೇ, ಪು.೩೧

೧೫. ಅದೇ, ಪು.೩೧

೧೬. ಅದೇ, ಪು.೩೧

ವೇದಗಳ ಕಾಲದಲ್ಲಿ ವಿವಾಹದ ಮೂಲಕ ಪಾತಿಯೇ ಪರಮೇಶ್ವರ, ಪರದೈವ, ಪತಿಯೆ ಪತ್ನಿಯಾದವಳ ಎಲ್ಲ ಕಾರ್ಯಚಟುವಟಿಕೆಗಳಿಗೂ ಕೇಂದ್ರ ಬಿಂದುವಿನಂತಿರುವುದರಿಂದ ಮತ್ತು ಅವನ ಎಲ್ಲ ಬೇಡಿಕೆಗಳನ್ನು ತನ್ನ ಬೇಡಿಕೆಗಳೆಂದೆ ತಿಳಿದಿರುವುದರಿಂದ ಅವನು ಕೋಪಗೊಳ್ಳಲಿ, ದುಷ್ಟನಾಗಲಿ, ರೋಗಿಷ್ಟನಾಗಲಿ ಅಥವಾ ಕುಡುಕನಾಗಿದ್ದರೂ ಸಹ ಅವನ ವಿರುದ್ಧ ನಡೆದುಕೊಳ್ಳುವಂತಿರಲಿಲ್ಲ. ಹೆಂಡತಿ ಯಾದವಳು ತನ್ನ ಗಂಡನು ಬದುಕಿದ್ದಾಗ ಮಾತ್ರವಲ್ಲದೆ ಅವನು ಮೃತನಾದ ಮೇಲೂ ಈ ಲೋಕದಲ್ಲಿ ತೋರಿದಂತೆ ಪರಲೋಕದಲ್ಲೂ ಅವನ ಬಗ್ಗೆ ನಿಷ್ಠೆಯಿಂದಿರಬೇಕು. ಏಕೆಂದರೆ ಪತಿವ್ರತೆಯಾದವಳು ತನ್ನ ಪತಿಯನ್ನಲ್ಲದೆ ಅನ್ಯರನ್ನು ಮನದಲ್ಲಿ ಕಲ್ಪಿಸುವಂತಿರಲಿಲ್ಲ. ಇದರಿಂದಾಗಿ ಸಹಜವಾಗಿಯೇ ಹೆಂಡತಿ ಯಾದವಳು ತನ್ನ ಗಂಡನು ಮೃತನಾದ ಮೇಲೆ ಲೌಕಿಕ ಸುಖ ಸಂತೋಷಗಳನ್ನೆಲ್ಲ ತೊರೆದು ವೈರಾಗ್ಯ ಜೀವನ ನಡೆಸಬೇಕು ಇಲ್ಲವೇ ಪತಿಯೊಂದಿಗೆ ಚಿತಿಯೇರಬೇಕಾಯಿತು.

"ಸತಿಪದ್ಧತಿಯು ಅತಿ ಪ್ರಾಚೀನ ಕಾಲದಿಂದಲೂ ಪ್ರಾರಂಭವಾಗಿರಬಹುದು. ಮನು ಮತ್ತು ಯಜ್ಞವಲ್ಕರು ಸೂಚಿಸಿರುವ ಪ್ರಕಾರ ವಿಧವೆಯಾದವಳು ವೈರಾಗ್ಯ ಜೀವನವನ್ನು ನಡೆಸಬೇಕೆಂದಿದ್ದಾರೆ. ವಿಧವೆಯಾದವಳ ಎರಡನೇ ವಿವಾಹವನ್ನು ಕುಟುಂಬಕ್ಕೆ ಸೀಮಿತಗೊಳಿಸುವುದನ್ನು ತಡೆಯಲು ನಿಯೋಗ ಪದ್ಧತಿ ಅನುಸರಿಸಿದರು, ಇದರ ಮೂಲಕ ವಿವಾಹವಾಗದಂತೆ ತಡೆಯಲಾಗಿದೆ."[೧] ವಿಧವಾ ವಿವಾಹ ಪದ್ಧತಿಯಿರುವುದರಿಂದ ಸತಿ ಪದ್ಧತಿಯನ್ನು ಯಾರು ಇಚ್ಚಿಸುತ್ತಿರಲಿಲ್ಲ. ವಿಧವೆಯರು ವಿವಾಹವಾಗದೆ ತಮ್ಮ ಪತಿಗಾಗಿಯೇ ಪಾತಿವ್ರತ್ಯವನ್ನು ಉಳಿಸಿಕೊಳ್ಳಲು ಸತಿಪದ್ಧತಿಯು ಜಾರಿಗೆ ಬಂದಿತು. "ಆರು ಮತ್ತು ಒಂಬತ್ತನೆಯ ಶತಮಾನದಲ್ಲಿ ಸತಿ ಪದ್ಧತಿಯು ಬ್ರಾಹ್ಮಣರಲ್ಲಿ ಅಲ್ಲದೆ ರಜಪೂತರು ಸಹ ಅನುಸರಿಸುತ್ತಿದ್ದರು. ಕ್ರಿ.ಶ.ಆರಂಭದಿಂದಲೂ ವಿಧವಾ ವಿವಾಹದ ಬಗ್ಗೆ ವಿರುದ್ಧವಾದ ಅಭಿಪ್ರಾಯಗಳಿದ್ದವು. ಆದರೆ ಏಳನೇಯ ಶತಮಾನದಲ್ಲಿ ವಿಧವಾ ವಿವಾಹ ಬಹಳ ಅಪರೂಪವಾಗಿ ಕಂಡುಬರುತ್ತದೆ."[೨] ಕಾಲ ಉರುಳಿದಂತೆಲ್ಲ ಪಾತಿವ್ರತ್ಯದ ಭಾವನೆ ಹಿಂದೂ ಸ್ತ್ರೀಯಲ್ಲಿ ಎಷ್ಟು ಆಳವಾಗಿ ಬೇರೂರಿತೆಂದರೆ ಗಂಡನೊಂದಿಗೆ ಜೀವಸಹಿತ ಸಾಯುವುದು ಒಂದು ಉನ್ನತವಾದ ಆಕಾಂಕ್ಷೆಯಾಗಿ ಪರಿಣಮಿಸಿತು. ಇದರಿಂದ ಸತಿ ಪದ್ಧತಿಯನ್ನು ಅನುಸರಿಸಿದ ಹೆಂಗಸರನ್ನು ಗೌರವಿಸುತ್ತಿದ್ದರು. ಹದಿನಾರನೇ ಶತಮಾನದ ತರುವಾಗಯ ಸತಿ ಪದ್ಧತಿಯನ್ನು ತಡೆಗಟ್ಟಲು ಮೊಟ್ಟ ಮೊದಲ ಬಾರಿಗೆ ಪ್ರಯತ್ನಿಸಿದವರು ಮಹಮ್ಮದ್ ಬಿನ್ ತುಘಲಕ್ ಯಾರಾದರೂ ವಿಧವೆಯರು ಸಹಗಮನ ಮಾಡಬಯಸಿದರೆ ಅದಕ್ಕಾಗಿ ಪೂರ್ವಾನುಮತಿ ಪಡೆದುಕೊಳ್ಳಬೇಕು ಎಂದು ಅವನು ಆಜ್ಞೆ ಮಾಡಿದ್ದನು. "ಅಕ್ಬರನು ರಚಿಸಿದ ದೀನ-

ಎ-ಇಲಾಹಿ ಧರ್ಮವೂ ಕೂಡ ಸತಿಪದ್ಧತಿಯನ್ನು ಖಂಡಿಸಿದೆ.''[೩] ಔರಂಗಜೇಬನು ಸಹ ಸತಿಪದ್ಧತಿಯನ್ನು ನಿಷೇಧಿಸಲು ಪ್ರಯತ್ನಿಸಿದನು. ಆದರೆ ಸಂಪ್ರದಾಯದ ಒತ್ತಡದಿಂದ ಈ ಪದ್ಧತಿಯು ಪ್ರಭಾವಶಾಲಿಯಾಗಿ ಬೆಳೆಯುತ್ತ ಹೋಯಿತು. "ಹತ್ತೊಂಬತ್ತನೇ ಶತಮಾನದ ಹೊತ್ತಿಗೆ ವಿಶೇಷವಾಗಿ ಈ ಪದ್ಧತಿಯು ಬೆಳೆದಿದೆ. ೧೮೧೫ರಿಂದ ೧೮೨೮ರ ಅವಧಿಯಲ್ಲಿ ೮೧೩೪ ಸತಿ ಪ್ರಕರಣಗಳು ನಡೆದಿವೆ. ಇವುಗಳಲ್ಲಿ ಹೆಚ್ಚಾಗಿ ಕಲ್ಕತ್ತಾ ವಿಭಾಗಗಳಲ್ಲಿಯೆ ಕಂಡುಬಂದಿದೆ. ೧೮೧೫ ಮತ್ತು ೧೮೨೦ರ ನಡುವಣ ಅವಧಿಯಲ್ಲಿ ಸತಿ ಪದ್ಧತಿ ಆಚರಿಸುವವರು ಮೂರು ಜನ ೮ ವರ್ಷದವರು ೪೩ ಜನ ೯ ರಿಂದ ೧೪ ವರ್ಷದ ನಡುವಿನವರು ಆಗಿದ್ದರು. ೧೮೧೮ ರಲ್ಲಿ ಸತಿಪದ್ಧತಿಗೆ ಒಳಗಾದ ೮೩೯ ಜನರಲ್ಲಿ ೪೯ ಜನ ೨೦ ವರ್ಷದೊಳಗಿನವರು ಮತ್ತು ೧೨೨ ಜನ ೨೦ ರಿಂದ ೩೦ ವರ್ಷದೊಳಗಿನವರು. ೧೮೨೩ರ ಅವಧಿಯಲ್ಲಿ ಪ್ರಕಟವಾಗಿರುವಂತೆ ೫೭೫ ಜನರಲ್ಲಿ ೩೨ ಜನರು ೨೦ ವರ್ಷ ತುಂಬಿದವರು. ಅಲ್ಲದೆ ೨೦೮ ಜನರಲ್ಲಿ ೨೦ ರಿಂದ ೪೦ ವರ್ಷದೊಳಗಿದ್ದವರು ಸತಿ ಆಚರಿಸಿದರು. ಸ್ಮೃತಿಕಾರರು ಬ್ರಾಹ್ಮಣ ಹೆಂಗಸರಿಗೆ ಸತಿಪದ್ಧತಿಯನ್ನು ನಿಷೇಧಿಸಿದ್ದರೂ ೫೭೫ ಜನರಲ್ಲಿ ೨೩೪ರಷ್ಟು ಬ್ರಾಹ್ಮಣ ವಿಧವೆಯರೆ ೧೮೨೩ರಲ್ಲಿ ಸತಿಪದ್ಧತಿಯನ್ನು ಆಚರಿಸಿದರು.''[೪]

ಅನೇಕ ಸಮಯದಲ್ಲಿ ವಿಧವೆಯರಿಗೆ ಸತಿ ಪದ್ಧತಿಯು ಅನಿವಾರ್ಯವಾದ್ದರಿಂದ ತಮ್ಮ ಪತಿಯರೊಂದಿಗೆ ಮೃತರಾಗುವ ನಿರ್ಧಾರ ಮಾಡಬೇಕಾಯಿತು. ಅಂಥ ಸಂದರ್ಭದಲ್ಲಿ ಮತ್ತನ್ನುಂಟು ಮಾಡುವ ಪಾನೀಯಗಳನ್ನು ಕುಡಿಸಿ ಪ್ರಮಾಣ ಮಾಡಿಸಿ ಕೊಂಡು ಅವರನ್ನು ಮೃತನಾದ ಗಂಡನ ಶವದೊಂದಿಗೆ ಹಗ್ಗದಿಂದ ಬಂಧಿಸುತ್ತಿದ್ದರು ಅಥವಾ ಬಿದಿರಿನ ಬೊಂಬುಗಳನ್ನು ಅವಳ ಮೇಲೆ ಹೇರುತ್ತಿದ್ದರು. ಕಾರಣ ಅವಳು ಚಿತೆಯಿಂದ ತಪ್ಪಿಸಿಕೊಳ್ಳದಿರಲೆಂದು. ಈ ರೀತಿ ಒತ್ತಾಯ ಪೂರ್ವಕವಾಗಿ ವಿಧವೆಯರು ಪತಿಯೊಂದಿಗೆ ಪ್ರಾಣಕಳೆದುಕೊಳ್ಳುತ್ತಿದ್ದರು. ಈ ಸತಿಪದ್ಧತಿಯೂ ಬ್ರಿಟಿಷ ಆಳ್ವಿಕೆಯರ ಗಮನ ಸೆಳೆಯಿತು. ಬ್ರಿಟೀಷರು ಸತಿಪದ್ಧತಿಯನ್ನು ಹೋಗಲಾಡಿಸಲು ದೀರ್ಘಕಾಲ ಹಿಂಜರಿದರು ಕಾರಣ ಈ ಪದ್ಧತಿಯನ್ನು ಆಚರಿಸಲು ಧರ್ಮಗ್ರಂಥಗಳ ಒಪ್ಪಿಗೆ ಇತ್ತು ಎಂಬ ಕಾರಣದ ಜೊತೆಗೆ ಸಾಮಾಜಿಕ ವಿರೋಧವನ್ನು ಎದುರಿಸಬೇಕಾಗುತ್ತದೆ ಎಂಬ ಭಯದಿಂದ ಅವರು ಕಾನೂನನ್ನು ರಚಿಸಲಿಲ್ಲ.

"೧೭೪೯ರಲ್ಲಿ ಈ ಪದ್ಧತಿಯ ಬಗ್ಗೆ ಮೊದಲಬಾರಿಗೆ ವಿಚಾರಣೆ ನಡೆಯಿತು. ಆದರೆ ೧೮೦೫ರಲ್ಲಿ ೧೨ ವರ್ಷ ವಯಸ್ಸಿನ ವಿಧವೆಗೆ ಮಧ್ಯಪಾನ ಮಾಡಿಸಿ ಮತ್ತು ಬರಿಸಿ ಅವಳನ್ನು ಸತಿಪದ್ಧತಿಗೆ ಆಹುತಿ ನೀಡಿದರು. ಇದನ್ನು ಬಿಹಾರಿನ ಮ್ಯಾಜಿಸ್ಟ್ರೇಟ್ ಬಲಫಿನ ಸ್ಟೋನ ವಿರೋಧಿಸಿದರು. ಆಗ ಧರ್ಮಗ್ರಂಥಗಳಲ್ಲಿ ಈ ಪದ್ಧತಿಗೆ ಬೆಂಬಲವಿದೆಯೋ ಇಲ್ಲವೋ ಎಂಬುದನ್ನು ತಿಳಿಯಲು ಅಧ್ಯಯನ ನಡೆಸುವಂತೆ ನಿಜಾಮತ

ಅದಾಲತಗೆ ಸೂಚಿಸಿತು. ಧರ್ಮಗ್ರಂಥಗಳಲ್ಲಿ ಈ ಪದ್ಧತಿಗೆ ಬೆಂಬಲವಿದೆ. ಆದರೆ ಅದು ಸ್ವಇಚ್ಛೆಯಿಂದ ಆದುದಾಗಿರಬೇಕು. ಮಹಿಳೆ ಗರ್ಭಿಣಿಯಾದಾಗ, ಪಾನಮತ್ತ ಸ್ಥಿತಿಯಲ್ಲಿದ್ದಾಗ, ೧೬ ವರ್ಷಗಳಿಗಿಂತ ಕಡಿಮೆ ವಯಸ್ಸಿನವಳಿದ್ದಾಗ, ಯಾರಾದರೂ ಬೆದರಿಕೆಯೊಡ್ಡಿದಾಗ ಸತಿ ಹೋಗುವುದನ್ನು ಧರ್ಮಗ್ರಂಥಗಳು ನಿಷೇಧಿಸಲಾಗಿದೆ ಎಂದು ಪಂಡಿತ ಘನಶ್ಯಾಂ ಸರಮಾನೋ ಅವರು ಧರ್ಮಗ್ರಂಥಗಳನ್ನು ಅಭ್ಯಸಿಸಿ ತಿಳಿಸಿದರು.''[೫] ಆಗ ಬ್ರಿಟಿಷ್ ಕಂಪನಿಯ ಕೆಲವು ಅಧಿಕಾರಿಗಳ ಪ್ರಯತ್ನಿದಿಂದ, ಕ್ರೈಸ್ತ ಮತ ಪ್ರಚಾರಕರು ವಹಿಸಿದ ಶ್ರಮದಿಂದ ಮತ್ತು ಸುಧಾರಣೆ ಮಾಡುವ ಸಲುವಾಗಿ ರಾಜಾರಾಮ ಮೋಹನರಾಯ ಕೈಗೊಂಡ ಧರ್ಮಯುದ್ಧವೇ ಮುಂತಾದವುಗಳು ಈ ಭಯಂಕರವಾದ ಸತಿಪದ್ಧತಿಯ ಬಗ್ಗೆ ಜನರಲ್ಲಿ ಎಚ್ಚರ ಉಂಟುಮಾಡಿದರು. ''ರಾಜಾರಾಮ ಮೋಹನರಾಯರು ಪ್ರಾಚೀನ ಶಾಸ್ತ್ರಗ್ರಂಥಗಳ ದೃಷ್ಟಿಯಿಂದ ಮಾತ್ರ ಅಲ್ಲದೇ ಮಾನವೀಯತೆಯ ದೃಷ್ಟಿಯಿಂದಲೂ ಸಹ ಸತಿಪದ್ಧತಿ ಅಮಾನವೀಯವಾದದ್ದೆಂದು ಗಟ್ಟಿ ಧ್ವನಿಯಲ್ಲಿ ಪ್ರಚಾರ ಮಾಡಲು ಆರಂಭಿಸಿದರು. ಅವರು ಬಂಗಾಳಿ ಭಾಷೆಯಲ್ಲಿ ''ಸಂವಾದ ಕಾಮುದಿ''ಯೆಂಬ ಪತ್ರಿಕೆಯನ್ನು ೧೮೧೯ರಲ್ಲಿ ಆರಂಭಿಸಿ ಸತಿಯ ವಿರುದ್ಧದ ಪ್ರಚಾರಕ್ಕಾಗಿ ವೇದಿಕೆಯನ್ನು ನಿರ್ಮಿಸಿಕೊಂಡರು. ''ಸಮಾಚಾರ ದರ್ಪಣ'' ಮತ್ತು ''ವಂಗದೂತ'' ಮುಂತಾದ ಪತ್ರಿಕೆಗಳಲ್ಲೂ ಸತಿ ವಿರುದ್ಧದ ಪ್ರಚಾರದ ಲೇಖನಗಳು ಬರಲಾರಂಭಿಸಿದವು.''[೬]

''ಬೆಂಟಿಂಕನು ಈ ಪದ್ಧತಿಯನ್ನು ಬೇರುಸಮೇತ ಕಿತ್ತು ಹಾಕುವ ಸಲುವಾಗಿ ೧೮೨೯ರ ಡಿಸೆಂಬರ್ ೪ರಂದು ಸತಿಪದ್ಧತಿಯನ್ನು ನಿಷೇಧಿಸುವ ಕಾನೂನನ್ನು ಜಾರಿಗೆ ತಂದರು.''[೭] ಈ ಕಾನೂನನ್ನು ಜಾರಿಗೆ ತರುವಲ್ಲಿ ರಾಜರಾಮ ಮೋಹನರಾಯರು ಪೂರ್ಣ ಬೆಂಬಲ ನೀಡಿದರು. ''ಈ ಕಾಯ್ದೆಯ ಪ್ರಕಾರ ವಿಧವೆಯರನ್ನು ಸಜೀವವಾಗಿ ದಹನ ಮಾಡುವುದಾಗಲಿ ಅಥವಾ ಹೂಳುವುದಾಗಲಿ ಮಾಡಬಾರದು ಒಂದು ವೇಳೆ ಇಂತಹ ಹೇಯ ಕೃತ್ಯ ಮಾಡಿದರೆ ಅಂಥವರು ಶಿಕ್ಷೆಗೆ ಗುರಿಯಾಗುವರು. ಮತ್ತು ದಂಡ ಕೊಡಬೇಕಾಗುವುದು. ಅಥವಾ ಜೈಲುವಾಸವನ್ನು ಅನುಭವಿಸಬೇಕಾಗುವುದು. ವಿಧವೆಯಾದವಳನ್ನು ಸತಿ ಪದ್ಧತಿಗೆ ಒಳಗಾಗುವಂತೆ ಒತ್ತಾಯ ಪಡಿಸುವುದಾಗಲಿ, ಮತ್ತನ್ನುಂಟು ಮಾಡುವ ಔಷಧವನ್ನು ಸೇವಿಸುವುದಾಗಲಿ, ಅವಳ ಅಭಿಪ್ರಾಯಕ್ಕೆ ವಿರುದ್ಧವಾಗಿ ವರ್ತಿಸಿದಾಗ ಅಂಥವರನ್ನು ಕೊಲೆಗಾರರು ಎಂದು ಅವರನ್ನು ಮರಣದಂಡನೆ ವಿಧಿಸಲಾಗಿತ್ತು. ಸತಿಪದ್ಧತಿಯನ್ನು ಆಚರಿಸಲು ಸಹಾಯ ಮಾಡಿದವರನ್ನು ಐ.ಪಿ.ಸಿ ಕಾಯಿದೆಯ ಪ್ರಕಾರ ಆತ್ಮಹತ್ಯೆಗೆ ಪ್ರಚೋದಿಸಿದ್ದಕ್ಕೆ ಸಮನಾದ ಕೃತ್ಯವೆಂದು ಪರಿಗಣಿಸುತ್ತಿದ್ದರು.''[೮] ರಾಜಾರಾಮ ಮೋಹನರಾಯ ಅವರಿಗೆ ಇಂಥ ಉಗ್ರಕ್ರಮದ ಮನೋಭಾವನೆ ಇಲ್ಲದಿದ್ದರೂ ಬೆಂಟಿಂಕನ ಕಾಯಿದೆಯ ವಿಷಯ ತಿಳಿದ ಮೇಲೆ ಹಿಂದೂಗಳು ಬೆಂಟಿಂಕನಿಗೆ ಬೆಂಬಲ ನೀಡಿದರು. ಇದರಿಂದ ಸತಿಪದ್ಧತಿಯು ಸ್ವಲ್ಪಮಟ್ಟಿಗೆ ಕಡಿಮೆಯಾಯಿತು.

ಸತಿ ಪದ್ಧತಿಯನ್ನು ನಿಷೇಧಿಸುವ ಕಾಯ್ದೆಯು ಜಾರಿಗೆ ಬಂದನಂತರ ವಿಧವೆಯಾದವಳು ಹಲವಾರು ರೀತಿಯ ಕಷ್ಟಗಳನ್ನು ಎದುರಿಸಬೇಕಾಯಿತು. ಅವಳು ಆರ್ಥಿಕವಾಗಿ ತನ್ನ ಗಂಡನ ಕುಟುಂಬದವರನ್ನೇ ಅವಲಂಬಿಸುವುದರಿಂದ ಅವರು ಅವಳನ್ನು ಅಸಹ್ಯ ರೀತಿಯಲ್ಲಿ ನೋಡುತ್ತಿದ್ದರು. ಅಲ್ಲದೆ ಕುಟುಂಬದಲ್ಲಿ ಯಾವುದೇ ಅಸಂತೋಷದ ಘಟನೆ ನಡೆದರೂ ಅವಳನ್ನೇ ದೂರಲು ಪ್ರಾರಂಭಿಸಿದರು, ಶಪಿಸುತ್ತಿದ್ದರು. ಮನೆಯಲ್ಲಿ ಅವಳು ಶ್ರಮಪಟ್ಟು ಕೆಲಸ ಮಾಡಬೇಕಾಗುತ್ತಿತ್ತು. ಅಲ್ಲದೆ ಅವಳನ್ನು ಅಮಂಗಳೆ ಎಂದು ಬೆಳಿಗ್ಗೆ ಎದ್ದ ತಕ್ಷಣವೇ ಅವಳನ್ನು ನೋಡುವುದು, ಶುಭಕಾರ್ಯಕ್ಕೆ ಹೊರಡುವಾಗ ಅಮಂಗಳ ಎಂದು ತಿಳಿಯುತ್ತಾರೆ.

ಯಾವುದೇ ಮಂಗಳ ಕಾರ್ಯದಲ್ಲಿ ಅವಳು ಪಾಲ್ಗೊಳ್ಳುವುದು ಅಪಮಾನವಾಗಿತ್ತು. ಇದರಿಂದ ಅವಳು ತನ್ನ ಸ್ವಂತ ಮಕ್ಕಳ ಶುಭಕಾರ್ಯದಲ್ಲೂ ಸಹ ಒಂಟಿಯಾಗಿ ದೂರವಿರಬೇಕಾಗಿತ್ತು. ವಿಧವೆಯಾಗಿರುವುದರಿಂದ ಸಮಾಜವು ಸಹ ಕಟುವಾಗಿ ವರ್ತಿಸತೊಡಗಿತು. ಒಂದು ವೇಳೆ ವಿಧವೆಯಾದವಳು ಯೌವ್ವನವತಿಯೂ, ರೂಪವತಿಯೂ ಆಗಿದ್ದರಂತೂ ಅವಳನ್ನು ಕುಟುಂಬದ ಹೊರಗಿನವರಿಂದ ಮತ್ತು ಕೆಲವೊಂದು ಬಾರಿ ಕುಟುಂಬದವರಿಂದಲೇ ಅವಳು ಅತ್ಯಾಚಾರಕ್ಕೆ ಒಳಗಾಗುತ್ತಿದ್ದಳು. ಈ ರೀತಿ ಅತ್ಯಾಚಾರಕ್ಕೆ ಒಳಗಾಗಿ ಅವಳು ಗರ್ಭವತಿಯಾದರಂತು ಅವಳ ಗಂಡನ ರಕ್ತಸಂಬಂಧಿಕರಿಗೆ ಮತ್ತು ತಂದೆ-ತಾಯಿಗೂ ಮುಖ ತೋರಿಸುವಂತಿರಲಿಲ್ಲ. ಅವಳು ತನ್ನ ತಂದೆ-ತಾಯಿಗಳ ಗೌರವವನ್ನು ಕಾಪಾಡಲು ಕೆಲವೊಂದು ಬಾರಿ ಆತ್ಮಹತ್ಯೆ ಸಹ ಮಾಡಿಕೊಳ್ಳುತ್ತಿದ್ದಳು. ಈ ರೀತಿ ಅವಳು ವಿಧವೆಯಾಗಿ ಜೀವನ ಸಾಗಿಸುವುದು ತುಂಬಾ ಕಷ್ಟಕರವಾಗಿತ್ತು. ಸತಿಪದ್ಧತಿಯನ್ನು ತಡೆಗಟ್ಟುವ ಸಲುವಾಗಿ ೧೮೨೯ರಲ್ಲಿ ಜಾರಿಗೆ ತಂದ ಕಾಯಿದೆಯು ಸಹ ಎಳೆಯವಯಸ್ಸಿನ ವಿಧವೆಯರಿಗೆ ಹೊಸ ರೀತಿಯ ಸಮಸ್ಯೆಗಳನ್ನು ತಂದೊಡ್ಡಿತು. ಈ ರೀತಿಯಲ್ಲಿ ಎಳೆಯ ವಯಸ್ಸಿನಲ್ಲಿಯೇ ವಿಧವೆಯರಾಗಲು ಕಾರಣ ಬಾಲ್ಯವಿವಾಹ ಪದ್ಧತಿ. ಧಾರ್ಮಿಕವಾಗಿ ಮತ್ತು ಸಾಮಾಜಿಕ ನಿಯಮಗಳಿಂದ ಈ ಬಾಲ್ಯವಿವಾಹ ಪದ್ಧತಿಯು ಕಡ್ಡಾಯವಾದಂಥ ನಿಯಮವಾಗಿತ್ತು. ಕೆಲವು ದಿನಗಳಲ್ಲಿ ಬಾಲ್ಯವಿವಾಹ ಪದ್ಧತಿಯಲ್ಲಿಯೇ ಗರ್ಭದಲ್ಲಿರುವಾಗಲೇ ವಿವಾಹವನ್ನು ನಿಶ್ಚಯಿಸಲು ಪ್ರಾರಂಭಿಸಿದರು. ಈ ರೀತಿ ಬಾಲ್ಯವಿವಾಹ ಮಾಡುವುದರಿಂದ ಕೆಳವರ್ಗದವರಿಗೆ ತೊಂದರೆಯಾಗಿರಲಿಲ್ಲ. ಕಾರಣ ವಿಧವೆಯರಿಗೆ ಮರುವಿವಾಹ ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿದ್ದರು. ಆದರೆ ಮೇಲ್ವರ್ಗದವರಿಗೆ ಗರ್ಭದಲ್ಲಿಯೇ ಮದುವೆ ಮಾಡುವುದರಿಂದ ಪತಿಯ ಮುಖವನ್ನು ಸಹ ನೋಡದೆ ಅವಳು ವಿಧವೆಯಾಗುತ್ತಿದ್ದಳು. ಈ ರೀತಿ ವಿಧವೆಯಾಗಿರುವದರಿಂದ ಅವರು ಜೀವನ ನಡೆಸುವುದೇ ತುಂಬಾ ತೊಂದರೆಯಾಗಿತ್ತು. "ಆದರೆ ಈಶ್ವರಚಂದ್ರ ವಿದ್ಯಾಸಾಗರರು ವೈಧವ್ಯದ ದುಸ್ಥಿತಿಯನ್ನು ಕುರಿತು ವಿಧವೆಯರ ಎಲ್ಲ ಸಮಸ್ಯೆಗಳನ್ನು ಶಾಸ್ತ್ರಧಾರ ಸಹಿತವಾಗಿ ಅಭ್ಯಸಿಸಿ, "ಹಿಂದೂ ವಿಧವೆಯರ ವಿವಾಹ"

ಎಂಬ ಪುಸ್ತಕವನ್ನು ಬರೆದರು. ಈಶ್ವರ ಚಂದ್ರ ವಿದ್ಯಾಸಾಗರರ ಪ್ರಯತ್ನದಿಂದಾಗಿ ಹಿಂದೂ ವಿಧವಾವಿವಾಹ ಕಾಯಿದೆಯು ೧೮೫೬ ಜುಲೈ ೨೬ರಂದು ಜಾರಿಗೆ ಬಂದಿತು. ಈ ಕಾಯ್ದೆಯು ಸೆಕ್ಷನ ೧೫ನೇ ಕಾಲಂನಲ್ಲಿ ಕಾನೂನು ಆಗಿ ಜಾರಿಯಾಯಿತು."[೯] ಆದರೆ ಕೆಲವು ಕಾರಣಗಳಿಂದ ಹಿಂದೂ ಸಮಾಜದಲ್ಲಿ ವಿಧವಾ ಪುನರ್ವಿವಾಹವು ಆಚರಣೆಗೆ ಬರಲಿಲ್ಲ ಕಾರಣ, ಹಿಂದೂ ಸ್ತ್ರೀ ಬೆಳೆದಿರುವ ಮನೆಯ ವಾತಾವರಣವೆಂದರೆ ಅವರು ಪಾತಿವ್ರತ್ಯದ ಆದರ್ಶವನ್ನು ಇಟ್ಟುಕೊಂಡು ಬೆಳೆದಿರುತ್ತಾರೆ. ಈ ರೀತಿ ಮರುವಿವಾಹವಾಗುವುದು ಸಂಪ್ರದಾಯಕ್ಕೂ ವಿರುದ್ಧವಾಗಿತ್ತು. ಆದ್ದರಿಂದ ಹಿಂದೂ ಜನರಲ್ಲಿ ಈ ಪದ್ಧತಿ ಆಚರಣೆಗೆ ಬರಲಿಲ್ಲ.

ವಿಧವಾ ಪುನರ್ವಿವಾಹ ಕಾಯ್ದೆಯು ಹಿಂದೂ ವಿಧವೆಯರ ಪುನರ್ವಿವಾಹವನ್ನು ನ್ಯಾಯಬದ್ಧವನ್ನಾಗಿ ಮಾಡಿತು. ಈ ಕಾಯ್ದೆಯಲ್ಲಿ ಬರುವ ಒಂದು ಷರತ್ತಿನಿಂದಾಗಿ ಈ ಕಾನೂನಿಂದ ಒದಗಬಹುದಾದ ಅನುಕೂಲವೂ ಇಲ್ಲದಂತಾಯಿತು. "ಆ ಷರತ್ತು ಹೀಗಿದೆ ಯಾರು ವಿಧವೆಯಾಗಿರುವಳೋ ಅಂಥವಳು ಮೃತಪಟ್ಟ ಗಂಡನ ಆಸ್ತಿಯಿಂದ ಜೀವನಾಂಶ ರೂಪದಲ್ಲೋ ಅಥವಾ ಅವನ ವಂಶದವರ ಉತ್ತರಾಧಿಕಾರಿಗಳ ಪರವಾಗಿಯೋ ಇಲ್ಲವೇ ವಾಗ್ದಾನ ಪತ್ರದ ಮೂಲಕವೋ, ಇನ್ನಾವುದೇ ಕಾರಣದಿಂದ ಆಸ್ತಿಯನ್ನು ಕೊಟ್ಟಿದ್ದರೆ ಅದನ್ನು ತಾನು ಇತರರಿಗೆ ಕೊಡದೆ, ಅವಳು ಪುನಃ ಮದುವೆಯಾಗದೆ ಹಾಗೆಯೇ ಇದ್ದರೆ ಎಲ್ಲಿಯವರೆಗೆ ಅವಳು ಮದುವೆಯಾಗುವುದಿಲ್ಲ, ಅಲ್ಲಿಯವರೆಗೂ ಆ ಆಸ್ತಿಯನ್ನು ಅನುಭವಿಸಬಹುದು. ಒಂದುವೇಳೆ ಅವಳು ಪುನಃ ಮದುವೆಯಾದ ತಕ್ಷಣವೆ ಆ ಆಸ್ತಿಯ ಮೇಲಿನ ಹಕ್ಕನ್ನು ಕಳೆದುಕೊಳ್ಳುತ್ತಾಳೆ. ಅವಳು ಆ ಆಸ್ತಿಯಲ್ಲಿ ಪಾಲನ್ನು ಕೇಳುವಂತಿರಲಿಲ್ಲ. ಈ ಕಾಯಿದೆಯು ಸೂಚಿಸುವ ಮತ್ತೊಂದು ಅಂಶವೆಂದರೆ ಪುನರ್ವಿವಾಹವಾಗುವ ವಿಧವೆ ಇನ್ನು ಋತುಮತಿಯಾಗದೇ ಇದ್ದು ಮತ್ತು ಮದುವೆಯ ಎರಡನೆಯ ಶಾಸ್ತ್ರವಾದ ನಿಷೇಕ ಪ್ರಸ್ತವೂ ಆಗದೇ ಇದ್ದರೆ ಆಗ ಅವಳು ತಂದೆಯ, ಅಜ್ಜನ, ತಾಯಿಯ ಹಿರಿಯ ಅಣ್ಣನ ಅಥವಾ ತನಗಿಂತ ಹಿರಿಯ ಸಂಬಂಧಿಗಳ ಒಪ್ಪಿಗೆ ಪಡೆಯದೆ ಪುನಃ ವಿವಾಹ ಮಾಡಿಕೊಳ್ಳುವಂತಿರಲಿಲ್ಲ. ಒಂದುವೇಳೆ ಅವಳು ಋತುಮತಿಯಾಗಿದ್ದರೆ, ಪ್ರಾಪ್ತವಯಸ್ಕಳಾಗಿದ್ದರೆ, ಆಗ ಅವಳು ತನ್ನ ಸ್ವಂತ ಇಚ್ಛೆಯ ಮೇರೆಗೆ ವಿವಾಹ ಮಾಡಿಕೊಳ್ಳಬಹುದಿತ್ತು."[೧೦] ವಿಧವಾ ವಿವಾಹವನ್ನು ಒಂದು ಉತ್ತಮ ಸಂಪ್ರದಾಯವೆಂದು ಪರಿಗಣಿಸಿರಲಿಲ್ಲ. ಅಲ್ಲದೆ ಬ್ರಾಹ್ಮಣ ವಿವಾಹದ ಎರಡು ಪ್ರಮುಖ ಲಕ್ಷಣಗಳನ್ನು ಹೊಂದಿರಲಿಲ್ಲ. ಅದು ಕನ್ಯಾದಾನದ ವಿವಾಹವೇನಲ್ಲ, ಆದ್ದರಿಂದ 'ಬ್ರಾಹ್ಮ' ರೀತಿಯ ವಿವಾಹದ ಸಂಪ್ರದಾಯಕ್ಕೊಳಗಾಗಿದ್ದ ಜನರಿಗೆ ಇಂಥ ವಿವಾಹಗಳು ಅಗತ್ಯವಾದ ಎಲ್ಲ ನಿಯಮಗಳನ್ನು ಪಾಲಿಸಲಿಲ್ಲ. ಎರಡನೆಯದಾಗಿ, ಪತಿವ್ರತಾ ಎಂಬ ಆದರ್ಶ ದೃಷ್ಟಿಯಿಂದಲೂ ಮತ್ತು 'ಸತಿ' ಪದ್ಧತಿಯ ದೃಷ್ಟಿಯಿಂದಲೂ ಯೋಚಿಸುವಂತಿರಲಿಲ್ಲ. ವಿಧವಾ ವಿವಾಹವು ಒಂದು ದೃಷ್ಟಿಯಲ್ಲಿ ಸಾಮಾಜಿಕ ಕಳಂಕವಾಗಿತ್ತು. ಈ ಕಳಂಕದ ಹೊರೆಯನ್ನು ತಂದೆ-ತಾಯಿಗಳಾಗಲಿ, ವಿಧವೆಯಾದವಳಾಗಲಿ

ಸಹಿಸುತ್ತಿರಲಿಲ್ಲ. ಮೃತಪಟ್ಟಂಥ ಮೊದಲಿನ ಗಂಡನಿಗೆ ಹುಟ್ಟಿದ ಮಕ್ಕಳು ತಮ್ಮ ತಾಯಿ ಮತ್ತೊಬ್ಬನನ್ನು ವಿವಾಹ ಮಾಡಿಕೊಂಡ ಮೇಲೆ ಆ ಮಕ್ಕಳು ಮೊದಲ ತಂದೆಯ ರಕ್ತ ಸಂಬಂಧಿಕರಿಗೆ ಸೇರುತ್ತಾರೆ. ಇದರಿಂದಾಗಿಯೇ ವಿಧವಾ ವಿವಾಹವು ಹಿಂದೂ ಸಮಾಜದಲ್ಲಿ ಸಮಸ್ಯೆಯಾಗಿಯೇ ಉಳಿದುಬಂದಿತು.

ವಿಧವಾ ವಿವಾಹವು ಸಮಸ್ಯೆಯಾಗಿರುವುದರಿಂದಲೇ ಮಲಬಾರಿಯವರು ಈ ಕಾಯ್ದೆಯ ದೌರ್ಬಲ್ಯವನ್ನು ಗಮನಿಸಿದರು. ಲಕ್ಷಾಂತರ ವಿಧವೆಯರಿಗೆ ಅವರ ಜೀವನವೇ ಅವರಿಗೆ ಒಂದು ರೀತಿಯ ಹೊರೆಯಾಗಿ ಪರಿಣಮಿಸಿತು. ವಿಧವಾ ವಿವಾಹವು ಸಮಾಜಕ್ಕೆ ದೊಡ್ಡಗಂಡಾಂತರವಾಗಿ ಪರಿಣಮಿಸಿತು. ವಿದ್ಯಾವಂತ ಯುವಕರು ಮತ್ತು ಸಂಪ್ರದಾಯಸ್ಥರಾದ ಕೆಲವು ಹಳೇ ಕಾಲದ ಜನರು ಇಂಥ ಅಪಾಯದಿಂದ ಪಾರಾಗಲು ಉನ್ನತ ಉದ್ದೇಶಕ್ಕಲ್ಲದಿದ್ದರೂ ತಮ್ಮ ಸ್ವಂತ ಹಿತಾಸಕ್ತಿಯ ದೃಷ್ಟಿಯಿಂದಾದರೂ ಇಚ್ಛಿಸಿದರು. ವಿಧವೆಯರು ಮಾಡಿದ ತಪ್ಪುಗಳು ಸಾರ್ವಜನಿಕ ತಪ್ಪುಗಳಾದವು. ಆಗ ಅವರು ಸಮಾಜದಿಂದ ಬಹಿಷ್ಕೃತರಾಗುತ್ತಿದ್ದರು. ಆದ್ದರಿಂದಲೆ ಮಲಬಾರಿಯವರು ಸರ್ಕಾರಕ್ಕೆ ಈ ರೀತಿಯ ಮನವಿ ಪತ್ರವನ್ನು ಬರೆದರು "ಬ್ರಿಟಿಷ್ ಸರ್ಕಾರ ಸತಿ ಪದ್ಧತಿಯನ್ನು ರದ್ದುಪಡಿಸಿದ್ದರಿಂದ ಉಂಟಾದ ಪರಿಣಾಮಗಳೇ ಇವು. ಒಂದು ವೇಳೆ ಮೌಂಟ ಸ್ಟೂವರ್ಟ ಎಲಫಿನಸ್ಟನ, ಹಾಗೂ ಲಾರ್ಡ್ ವಿಲಿಯಂ ಬೆಂಟಿಂಕ ಅವರು ಅನಂತರದ ಪರಿಣಾಮಗಳನ್ನು ಊಹಿಸಿದ್ದರೆ ಕಾನೂನಿನ ಆಗು ಹೋಗುಗಳನ್ನು ಆಲೋಚಿಸದೇ ಅನುಷ್ಠಾನಕ್ಕೆ ತರುತ್ತಿರಲಿಲ್ಲವೇನೋ, ಏಕೆಂದರೆ, 'ಸತಿ' ಪದ್ಧತಿಗೆ ತುತ್ತಾಗುತ್ತಿದ್ದವಳ ಕಲ್ಪನೆಯಂತೆ ತನ್ನ ಪ್ರಾಣಬಿಡಲು ಅದೊಂದು ಏಕೈಕ ಮಾರ್ಗವಾಗಿತ್ತು. ಸಮಾಜದ ದೃಷ್ಟಿಯಲ್ಲಿ ಧಾರ್ಮಿಕ ಮೌಲ್ಯದ ಕ್ರಿಯೆಯಾಗಿತ್ತು. ಆದರೆ ವಿಧವೆಯ ಮೇಲೆ ಸಮಾಜ ವಿಧಿಸುವ ನಿಯಮಗಳು ಅವಳಿಗೆ ನಿರಂತರವಾದ ದುಃಖವಾಗಿ ಪರಿಣಮಿಸುತ್ತಿದ್ದವು. ನರಳುವ ವಿಧವೆಗೆ ಯಾವುದೇ ಔನ್ನತ್ಯವನ್ನಾಗಲೀ, ಸಮಾಜಕ್ಕೆ ಯಾವ ನೈತಿಕ ಅನುಕೂಲವಾಗಲಿ ಆಗದಿದ್ದರೂ, ವಿಧವತ್ವ ಉರಿವ ಬೆಂಕಿಯಲ್ಲಿ ಸಾವಿನ ಯಾತನೆಯಂತಿರುತ್ತಿತ್ತು. ಆದ್ದರಿಂದಲೇ ಮಲಬಾರಿಯವರು ವಿಧವೆಯರ ಬಗ್ಗೆ ಕೆಲವು ನಿಯಮಗಳನ್ನು ಮಾಡುವಂತೆ ಸರ್ಕಾರಕ್ಕೆ ಸಲಹೆ ನೀಡಿದರು. ಆ ನಿಯಮಗಳು ಈ ರೀತಿ ಇವೆ.

೧. ಯಾವುದೇ ಹಿಂದೂ ಜನಾಂಗದ ಹುಡುಗಿ ಇನ್ನೂ ಋತುಮತಿಯಾಗದೇ ಇದ್ದಾಗಲೇ ತನ್ನ ಗಂಡನನ್ನು ಕಳೆದುಕೊಂಡರೆ ಇಲ್ಲವೇ ವಿವಾಹಕ್ಕೆ ನಿಶ್ಚಿತವಾಗಿರುವವನನ್ನು ಕಳೆದುಕೊಂಡರೆ ಅಂಥವಳನ್ನು ಜೀವನಾದ್ಯಂತವೂ ವಿಧವೆಯೆಂದು ಪರಿಗಣಿಸಲಾಗದು. ೧೮೫೬ರ ಹಿಂದೂ ವಿಧವೆಯರ ಪುನರ್ವಿವಾಹ ಕಾಯ್ದೆ ನಿಯಮಗಳನ್ನು ವ್ಯಾಪಕವಾಗಿ ಪ್ರಚಾರ ಮಾಡಬೇಕು. ಹಾಗೂ ಅವುಗಳನ್ನು ಜಾರಿಗೆ ತರಬೇಕು. ಇಂಥ ವಿಧವಾ ವಿವಾಹದ ಬಗ್ಗೆ ಸ್ವಜಾತಿಯವರಿಂದ ಬರಬಹುದಾದ ಪ್ರತಿಭಟನೆಗಳನ್ನು ಸರ್ಕಾರವೇ ಪರೋಕ್ಷವಾಗಿ ಈ ಪದ್ಧತಿಗೆ ಪ್ರೋತ್ಸಾಹ ನೀಡುವುದರ ಮೂಲಕ ಎದುರಿಸಬಹುದು.

೨. ವಿಧವೆಯಾಗಿರುವವಳು ಸ್ವಯಂ ಪ್ರೇರಣೆಯಿಂದ ಜೀವನಾದ್ಯಂತವೂ ಏಕಾಂಗಿಯಾಗಿಯೇ ಜೀವಿಸಲು ಸಂಕಲ್ಪಿಸಿರುವಳೇ ಇಲ್ಲವೇ, ಆ ರೀತಿ ಇರುವಂತೆ ಯಾರಾದರೂ ಕಟ್ಟಳೆ ವಿಧಿಸಿರುವರೇ ಎಂದು ಸಂದೇಹಾಸ್ಪದವಾಗಿರುವ ಪ್ರಕರಣಗಳಲ್ಲಿ ಕೂಲಂಕುಷವಾಗಿ ತಿಳಿದುಕೊಳ್ಳಬೇಕು.

೩. ಯಾವುದೇ ವಯಸ್ಸಿನ ವಿಧವೆ ತನ್ನ ಮನವಿ ಏನು ಎಂಬುದನ್ನು ಸಾಮಾಜಿ ಹೆದರಿಕೆಗೆ ಸಂಬಂಧಿಸಿದ ಅಧಿಕಾರಿಗಳಲ್ಲಿ ದೂರಹೇಳಿಕೊಳ್ಳುವ ಹಕ್ಕನ್ನು ಹೊಂದಿರಲೇಬೇಕು. ಅಲ್ಲದೆ ಅಂಥ ಕೌನ್ಸಿಲಗಳಲ್ಲಿ ವಾದಿಸಲು ಉಚಿತ ವಕೀಲರ ಸಹಾಯ, ನ್ಯಾಯಾಲಯಕ್ಕೆ ಖುದ್ದು ಹಾಜರಾಗೂವುದರಿಂದಲೂ ವಿನಾಯಿತಿ(ರಿಯಾಯಿತಿ) ಪಡೆಯಲು ಸೌಲಭ್ಯವನ್ನು ಒದಿಗಸಿಕೊಡಬೇಕು.

೪. ಪುರೋಹಿತನಾಗಿರುವವನಿಗೆ, ಎರಡನೇ ವಿವಾಹ ಮಾಡಿಕೊಳ್ಳುವ ಬಂಧುಗಳನ್ನಾಗಲಿ ಅಥವಾ ಅವರೊಂದಿಗೆ ಸಂಬಂಧ ಹೊಂದಿರುವವರನ್ನಾಗಲಿ ಅಥವಾ ಅದಕ್ಕೆ ಸಂಬಂಧ ಪಟ್ಟ ತತ್ವಗಳನ್ನಾಗಲಿ ಬಹಿಷ್ಕರಿಸುವ ಹಕ್ಕು ಇರುವುದಿಲ್ಲ.

ವಿಧವಾ ವಿವಾಹ ಸಮಸ್ಯೆ ಎಂಥವರಿಗೂ ಭಯವನ್ನುಂಟು ಮಾಡುವಂತಹುದು ಏಕೆಂದರೆ ಬಾಲ್ಯವಿವಾಹವು ಇದಕ್ಕೆ ಕಾರಣವಾಗಿದೆ. ಆದುದರಿಂದ ಮಲಬಾರಿಯವರು ಬಾಲ್ಯವಿವಾಹವು ಹೀಗೆ ಹಲಾವರು ತೊಂದರೆಗಳಿಗೆ ಕಾರಣವಾಗಿದೆ. ಅದರಲ್ಲೂ ಒತ್ತಾಯವಾಗಿ ವಿಧವೆಯರು ವಿಧವೆಯರಾಗಿಯೇ ಉಳಿಯುವಂತೆ ಮಾಡಿರುವುದನ್ನು ಒಳಗೊಂಡಂತೆ ಒಂದು ಮನವಿ ಪತ್ರವನ್ನು ೧೮ನೇ ಆಗಸ್ಟ್ ೧೮೮೪ರಲ್ಲಿ ಸರ್ಕಾರಕ್ಕೆ ಸಲ್ಲಿಸಿದರು.''[೧೧] ಈ ರೀತಿಯಾಗಿ ಮಲಬಾರಿಯವರು ಬಾಲ್ಯವಿವಾಹ ಮತ್ತು ವಿಧವೆಯರ ಸಮಸ್ಯೆಗಳ ವಿರುದ್ಧ ಹೋರಾಡಿದರು.

ಸಹಗಮನ ಪದ್ಧತಿಯಿಂದ ಮಹಿಳೆಯು ಮುಕ್ತಳಾದರೂ, ಯೌವ್ವನದಿಂದ ಕೂಡಿದ ತನ್ನ ಜೀವನ ಪರ್ಯಂತ ಅವಳು ವಿಧವೆಯಾಗಿ ಬಾಳಬೇಕಾಯಿತು. ಹಿಂದೂ ಸಂಪ್ರದಾಯಗಳು ರೂಢಿಗಳು ಮತ್ತು ಶಾಸ್ತ್ರಗಳ ಪ್ರಕಾರ ಅವಳು ತನ್ನ ಕೇಶಮುಂಡನವನ್ನು ಮಾಡಿಸಿಕೊಂಡು, ಅವಳು ತನ್ನ ಜೀವಿತ ಕಾಲದವರೆಗೂ ದುಃಖದಿಂದ ಬದುಕುವುದರ ಜೊತೆಗೆ ಕುಟುಂಬದವರನ್ನು ಅವಲಂಬಿಸಿರಬೇಕಾಗಿತ್ತು. ''೯ನೇ ಶತಮಾನದವರೆಗೂ ವಿಧವೆಯರ ಕೇಶಮುಂಡನ ಪದ್ಧತಿಯು ಇರಲಿಲ್ಲ. ಕೇವಲ ವಿರಕ್ತೆಯರು, ಸನ್ಯಾಸಿನಿಯರು ಮಾತ್ರ ಕೇಶಮುಂಡನವನ್ನು ಮಾಡಿಕೊಳ್ಳುತ್ತಿದ್ದರು. ವಿಧವೆಯಾದವಳು ಕೇಶ ಮುಂಡನವನ್ನು ಮಾಡಿಸಿಕೊಂಡು ಬ್ರಹ್ಮಚರ್ಯ ಜೀವನವನ್ನು ನಡೆಸಬೇಕಾದುದರಿಂದ ಅವಳನ್ನು ಕುರೂಪಿಗೊಳಿಸುವುದರ ಸಲುವಾಗಿ ಕೇಶ ಮುಂಡನ ಪದ್ಧತಿಯು ಪ್ರಾರಂಭವಾಯಿತು. ಅಲ್ಲದೇ ೧೦ನೇ ಶತಮಾನದವರೆಗೂ ಬಾಲವಿಧವಾ ವಿವಾಹವು ರೂಢಿಯಲ್ಲಿತ್ತು. ಮೊದಲು ಕೇಶಮುಂಡನವು ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿತ್ತು. ನಂತರ ಅದು ಮೇಲ್ವರ್ಗದ ಜನರಲ್ಲಿ ಪ್ರಾರಂಭವಾಯಿತು. ಕೇಶಮುಂಡನ ಪದ್ಧತಿಯು

ಹೆಚ್ಚಾಗಿ ಉತ್ತರ ಭಾರತದಲ್ಲಿ ಪ್ರಚಾರವಿತ್ತು.(ಆಚರಿಸುತ್ತಿದ್ದರು) ಕಾರಣ ದಕ್ಷಿಣ ಭಾರತದಲ್ಲಿ ಶ್ರೀವೈಷ್ಣವರು ಈ ಪದ್ಧತಿಯನ್ನು ವಿರೋಧಿಸುತ್ತಿದ್ದರು.''೨೨

ವಿಧವೆಯರ ಇರುವಿಕೆಯು ಅನಿಷ್ಟಕರವೆನಿಸ ತೊಡಗಿತು. ಬೆಳಿಗ್ಗೆ ವಿಧವೆಯರ ಮುಖ ನೋಡುವುದು ಸಹ ಅಶುಭಕರ ಎಂದು ಭಾವಿಸುತ್ತಿದ್ದರು. ಆದ್ದರಿಂದ ಅವಳ ಮುಖವನ್ನು ಬೆಳಿಗ್ಗೆ ಎದ್ದು ಯಾರು ನೋಡುತ್ತಿರಲಿಲ್ಲ. ಅಲ್ಲದೆ ಅವಳು ತನ್ನ ಮನೆಯಲ್ಲಿಯೂ ಸಹ ಸ್ವತಂತ್ರವಾಗಿ ಓಡಾಡುವಂತಿರಲಿಲ್ಲ. ಅವಳನ್ನು ಅಶುದ್ಧ ಮೈಲಿಗೆ ಎಂದು ಭಾವಿಸಿ ಒಂದು ಮೂಲೆಯಲ್ಲಿ ಕೂಡಿಸಿ ಅಮಾನವೀಯತೆಯಿಂದ ಕಾಣಲಾಗುತ್ತಿತ್ತು. ಅವಳು ಯಾವುದೇ ರೀತಿಯ ಆಭರಣಗಳನ್ನು ಧರಿಸುವಂತಿರಲಿಲ್ಲ. ಶೃಂಗರಿಸುವಂತಿರಲಿಲ್ಲ. ಅಲ್ಲದೆ ಅವಳು ಮಂಗಳಕಾರ್ಯಗಳಲ್ಲಿ ಪಾಲ್ಗೊಳ್ಳುವಂತಿರಲಿಲ್ಲ. ತನ್ನ ಮಗನ ಮದುವೆಯಲ್ಲಿಯೂ ಸಹ ಭಾಗವಹಿಸುವಂತಿರಲಿಲ್ಲ. ಉಪನಯನ ಸಮಾರಂಭಗಳಿಗೂ ಅವಳು ಹೋಗುವಂತಿರಲಿಲ್ಲ. ವಿಧವೆಯೂ ಕತ್ತಲು ಕೋಣೆಯಲ್ಲಿಯೇ ಕಾಲ ಕಳೆಯುತ್ತಿದ್ದಳು. ಈ ರೀತಿ ಅವಳು ಜೀವನವನ್ನು ನಡೆಸುವುದನ್ನು ಕಂಡು ವಿಧವೆಯ ತಂದೆ-ತಾಯಿಯು ಮರುಗುತ್ತಿದ್ದರು. ಅಳಿಯನ ಬದಲಾಗಿ ಮಗಳಾದರು ಸತ್ತಿದ್ದರೆ, ಇನ್ನೊಂದು ಮಗಳನ್ನು ಕೊಟ್ಟು ಮದುವೆ ಮಾಡುತ್ತಿದ್ದೆವು. ಇವಳಿಗೆ ಇಂಥ ಸ್ಥಿತಿ ಬರುತ್ತಿರಲಿಲ್ಲವೆಂದು ಮರುಗುತ್ತಿದ್ದರು.

ಸಮಾಜ ಸುಧಾರಕರು ವಿಧವೆಯು ತನ್ನ ಮಂಗಲಸೂತ್ರವನ್ನು ಮಾತ್ರ ತೆಗೆದು ಉಳಿದವನ್ನು ಇಟ್ಟುಕೊಳ್ಳಬಹುದು. ಏಕೆಂದರೆ ಅವಳು ಗಂಡನಿಂದ ಪಡೆದಿರುವುದೆ ಮಂಗಲಸೂತ್ರ ಮತ್ತು ಕಾಲುಂಗುರ. ಆತನು ಸತ್ತನಂತರ ಮಂಗಲಸೂತ್ರ ಮತ್ತು ಕಾಲುಂಗುರ ತೆಗೆದು ಹಾಕಿ ಉಳಿದ ಆಭರಣಗಳಾದ ಕೂದಲು, ಬಳೆ, ಕುಂಕುಮ, ಹೂ ಧರಿಸಬಹುದು. ಹಾಗೂ ಅವುಗಳ ಮೇಲೆ ಅವಳ ಅಧಿಕಾರವಿದೆ ಎಂದು ಹೇಳಿದ್ದಾರೆ. ''ಅಲ್ಲದೆ ವಿಧವೆಯರ ಕೇಶಮುಂಡನವನ್ನು ರದ್ದುಗೊಳಿಸುವಲ್ಲಿ ಜ್ಯೋತಿ ಬಾ ಅವರು ಪ್ರಮುಖ ಪಾತ್ರವಹಿಸಿದ್ದಾರೆ. ಈ ನಿಟ್ಟಿನಲ್ಲಿ ಕೆಲಸ ಮಾಡಿದ ಮೊದಲ ಸಮಾಜ ಸುಧಾರಕರಿವರು. ಇವರು ಬೊಂಬಾಯಿಯಲ್ಲಿ ಕ್ಷೌರಿಕರ ಸಭೆಯನ್ನು ಸೇರಿಸಿದರು. ಈ ಸಭೆಯಲ್ಲಿ ೪೦೦ ರಿಂದ ೫೦೦ರವರೆಗೆ ಕ್ಷೌರಿಕರು ಸಭೆ ಸೇರಿದರು. ಅವರಲ್ಲಿ ಒಬ್ಬ ಕ್ಷೌರಿಕನು ಹೀಗೆ ಹೇಳಿದ್ದಾನೆ. ''ತಮಗೆ ೪-೫ ಆಣೆಯ ಆಸೆ ತೋರಿಸಿ ಬ್ರಾಹ್ಮಣರು ಈ ಶಾಸ್ತ್ರ ವಿರೋಧಿ ಕೆಲಸವನ್ನು ನಮ್ಮಿಂದ ಮಾಡಿಸಿ, ತಾವು ೮-೧೦ ರೂಗಳನ್ನು ಪಡೆದುಕೊಳ್ಳುತ್ತಾರೆ ಎಂದು ಹೇಳಿದನು.'' ಈ ಸಭೆಯಲ್ಲಿ ಸೇರಿದ ಎಲ್ಲಾ ಕ್ಷೌರಿಕರೂ ಇನ್ನು ಮುಂದೆ ವಿಧವೆಯರ ಕೇಶಮುಂಡನವನ್ನು ಮಾಡುವುದಿಲ್ಲವೆಂದು ವಚನ ಸ್ವೀಕರಿಸಿದರು. ಕ್ಷೌರಿಕರ ಈ ನಿರ್ಧಾರದ ವಿಷಯ ಇಂಗ್ಲೆಂಡಿನವರೆಗೂ ಹಬ್ಬಿತು. ಅಲ್ಲಿನ ಕ್ಷೌರಿಕರು ಇಂತಹ ನಿರ್ಧಾರವನ್ನು ಕೈಗೊಂಡವರಿಗೆ ತಮ್ಮ ಮೆಚ್ಚುಗೆಯ ಪತ್ರಬರೆದು ಈ ವಿಷಯವು ಎಲ್ಲಾ ಕಡೆಯು

ಹಬ್ಬಿತು. ಜ್ಯೋತಿ ಬಾ ಅವರ ದಯೆಯಿಂದ, ಅವರ ದಿಟ್ಟ ನಿಲುವಿನಿಂದ ಬ್ರಾಹ್ಮಣ ವಿಧವೆಯರು ಸಕೇಶಿಯಾಗಿ ಉಳಿದು ಗೌರವಪೂರ್ಣ ಜೀವನವನ್ನು ನಡೆಸಲು ಅನುಕೂಲವಾಯಿತು."[೧೩]

"ಇದೇ ಸಮಯಕ್ಕೆ ವಿಧವಾ ಪುನರ್ವಿವಾಹದ ಕಾರ್ಯವು ೧೮೪೮ರಲ್ಲಿ ಮಹಾರಾಷ್ಟ್ರದಲ್ಲಿ ಪ್ರಾರಂಭವಾಯಿತು. ವಿಷ್ಣುಶಾಸ್ತ್ರೀ ಚಾಪಟ ಇವರು ವಿಧವಾ ಪುನರ್ವಿವಾಹದ ಬಗ್ಗೆ ಕಿರುಪುಸ್ತಕವನ್ನು ಬರೆದು ಅದರ ಪ್ರಚಾರ ಕಾರ್ಯವನ್ನು ಪುಣೆಯಲ್ಲಿ ಆರಂಭಿಸಿದರು. ೧೮೫೩ರ ಅಕ್ಟೋಬರ್ ಕೊನೆಯ ವಾರದಲ್ಲಿ ಮುಂಬೈಯ General assembly institution ನಲ್ಲಿ ಹಿಂದೂ ಸಮುದಾಯಗಳ ಸಭೆಯನ್ನು ನಡೆಸಿದರು. ವಿಧವಾ ಪುನರ್ವಿವಾಹವನ್ನು ಜಾರಿಗೊಳಿಸಲು ಸಲಹೆ, ಸೂಚನೆ, ಅಭಿಪ್ರಾಯಗಳನ್ನು ಕೇಳಲು ಈ ಸಭೆ ಸೇರಲಾಗಿತ್ತು. ಈ ಸಭೆಯಲ್ಲಿ ೫೦೦ಕ್ಕಿಂತ ಹೆಚ್ಚು ಜನ ಸೇರಿದ್ದರು. ಆದರೆ ಸಂಪ್ರದಾಯಸ್ತ ಶಾಸ್ತ್ರಿಗಳು ವಿಧವಾ ಪುನರ್ವಿವಾಹವನ್ನು ವಿರೋಧಿಸಿ ಅದಕ್ಕೆ ತಮ್ಮ ಅಸಮ್ಮತಿಯನ್ನು ಸೂಚಿಸಿದರು. ದ್ವೇಷ, ತಿರಸ್ಕಾರಗಳಿಂದ ಕೂಡಿದ ಈ ಚರ್ಚೆಯ ಸಭೆಯು ಮುರಿದು ಹೋಯಿತು."[೧೪]

ಭಾರತ ಸರ್ಕಾರವು ಜೂಲೈ ೨೫, ೧೮೫೬ರಲ್ಲಿ ವಿಧವಾ ಪುನರ್ವಿವಾಹ ಕಾಯ್ದೆಯನ್ನು ಪಾಸು ಮಾಡಿದ ನಂತರ ಈ ಕಾಯ್ದೆಯ ಪ್ರಕಾರ "ವಿಧವೆ ಪುನರ್ವಿವಾಹವಾಗಲು ಬಯಸಿದರೆ, ಅವಳು ವಿವಾಹ ಮಾಡಿಕೊಳ್ಳಬಹುದಾಗಿತ್ತು. ಅಲ್ಲದೆ ವಿಧವೆಯ ಗರ್ಭಧಾರಣೆಯೂ ನ್ಯಾಯಸಮ್ಮತವಾಗಿದ್ದರೆ, ಉಳಿದ ಹಿಂದೂ ಮಕ್ಕಳಂತೆ ಅವಳ ಸಂಪತ್ತಿನ ಒಡೆತನ ಅವಳ ಮಕ್ಕಳಿಗೆ ದೊರೆಯುತ್ತಿತ್ತು. ೧೮೫೭ರಲ್ಲಿ ರೆವಾಬಾಬಾ ಪದ್ಮಾಂಜಿ "ಯಮುನಾ ಪರ್ಯಟನ" ಎಂಬ ಮರಾಠಿ ಕಾದಂಬರಿಯನ್ನು ಬರೆದರು. ಇದರ ಮುಖಾಂತರ ಅವರು ಹಿಂದೂ ವಿಧವೆಯರ ದುಃಖ ದುಮ್ಮಾನಗಳನ್ನು ಜಗತ್ತಿನ ಮುಂದೆ ತೆರೆದಿಟ್ಟರು."[೧೫]

ವಿಧವಾ ಪುನರ್ವಿವಾಹದ ಸಮಸ್ಯೆಯು ಬ್ರಾಹ್ಮಣರಿಗೆ ಮತ್ತು ಬೇರೆ ಹಿಂದೂ ಉಚ್ಚಜಾತಿಯವರಿಗೆ ಸೀಮಿತವಾಗಿತ್ತು. ಜ್ಯೋತಿ ಬಾ ಅವರಿಗೆ ವಿಧವೆಯರ ಹೀನಾಯವಾದ ಸ್ಥಿತಿಗಳ ಬಗ್ಗೆ, ಅವರ ಅನೈತಿಕ ನಡವಳಿಕೆಗಳ ಬಗ್ಗೆ ಅವರನ್ನು ಸಂಪ್ರದಾಯ ಬದ್ಧಕಟ್ಟಳೆಗಳಿಂದ ಬಿಡುಗಡೆಯನ್ನು ಮಾಡುವುದು ಜ್ಯೋತಿ ಬಾ ಅವರ ಉದ್ದೇಶವಾಗಿತ್ತು. ಆದುದರಿಂದಲೆ ಅವರು ಶೇಣ್ವೆ, ವಿಧವಾ-ವಿಧುರರ ವಿವಾಹವನ್ನು ಅವರು ಪ್ರೋತ್ಸಾಹಿಸಿದರು. ಅಲ್ಲದೆ ವಿಧವೆಯನ್ನು ಪಾಪಕೃತ್ಯ ಮತ್ತು ಘೋರ ಅಪರಾಧದಿಂದ ಪಾರುಮಾಡುವುದರ ಸಲುವಾಗಿ ಜ್ಯೋತಿ ಬಾ ಅವರು ಒಂದು ಮಹತ್ತರವಾದ ನಿರ್ಣಯವನ್ನು ಕೈಗೊಂಡರು. ಜ್ಯೋತಿ ಬಾ ಅವರು ತಮ್ಮ ಮಾತಿಗಿಂತ ಕೃತಿಯಲ್ಲಿ ನಿಷ್ಠೆಯುಳ್ಳವರಾಗಿದ್ದರು. ಅದಕ್ಕಾಗಿ ಅವರು ಹೆಚ್ಚಿನ ಒತ್ತು ಕೊಡುತ್ತಿದ್ದರು. ಆಗಿನ ಕಾಲದಲ್ಲಿ ಯಾರಿಗೂ ಮಾಡಲು ಸಾಧ್ಯವಾಗದಂತಹ ಒಂದು ಕಾರ್ಯವನ್ನು ಮಾಡಿದರು. ಅದುವೇ "ವಿಧವಾ ಪ್ರಸೂತಿ ಗೃಹ" ೧೮೬೩ರಲ್ಲಿ ಸ್ಥಾಪಿಸಿದರು. ಇದರಲ್ಲಿ ವಿಧವೆಯರು

ಗುಪ್ತವಾಗಿ ಹೆರಿಗೆಗೆ ಬರಬಹುದಾಗಿತ್ತು. ಅಥವಾ ಹೆರಿಗೆಯಾದ ಮೇಲೆ ತಮ್ಮ ಮಕ್ಕಳನ್ನು ಅಲ್ಲಿಯೇ ಬಿಡಬಹುದಾಗಿತ್ತು. ಇದರ ಸಲುವಾಗಿಯೇ ಜ್ಯೋತಿ ಬಾ ಫುಲೆಯವರು ದಿಟ್ಟವಾದ ಘೋಷಣೆಗಳನ್ನು ಪುಣೆಯ ಮನೆಯ ಗೋಡೆಗಳ ಮೇಲೆ ಅಂಟಿಸಿದರು. ಅವರ ಮೇಲೆ "ಓ ವಿಧವೆಯರೇ ಬನ್ನಿ, ಗುಪ್ತವಾಗಿ ಮತ್ತು ಸುರಕ್ಷಿತವಾಗಿ ನಿಮ್ಮ ಮಗುವಿಗೆ ನೀವು ಇಲ್ಲಿ ಜನ್ಮಕೊಡಿ ನಿಮ್ಮ ಕಂದಮ್ಮಗಳನ್ನು ಇಲ್ಲಿ ಬಿಡಬಹುದು ಅಥವಾ ತೆಗೆದುಕೊಂಡು ಹೋಗಬಹುದು. ಈ ಅನಾಥಾಲಯ ನಿಮ್ಮ ಮಗುವನ್ನು ರಕ್ಷಿಸಿ, ಬೆಳೆಸುತ್ತದೆ."[೧೬] ಈ ರೀತಿ ಪ್ರಕಟಣೆಯನ್ನು ನೀಡಿರುವುದರಿಂದ ಸಂಪ್ರದಾಯಸ್ಥ ಹಿಂದೂಗಳು ಕೆರಳಿ ಕೆಂಡವಾದರು. ಈ ಸಂಸ್ಥೆಯು ಬ್ರಾಹ್ಮಣೇತರರಿಂದ ಸ್ಥಾಪಿಸಲ್ಪಟ್ಟಿದ್ದಾಗಿತ್ತು. ಕಾರಣ ಬ್ರಾಹ್ಮಣ ವಿಧವೆಯರನ್ನು ಭ್ರೂಣಹತ್ಯೆ, ಶಿಶುಹತ್ಯೆಗಳ ಪಾಪದಿಂದ ಪಾರುಮಾಡಲು ಮತ್ತು ಆತ್ಮಹತ್ಯೆ ಮಾಡಿಕೊಳ್ಳುವ ವಿಧವೆಯರನ್ನು ರಕ್ಷಿಸುವುದು ಈ ಸಂಸ್ಥೆಯ ಕಾರ್ಯವಾಗಿತ್ತು.

ಈ ಸಂಸ್ಥೆಯನ್ನು ಸ್ಥಾಪಿಸಲು ಜ್ಯೋತಿ ಬಾ ಫುಲೆಯವರು ಯಾವುದೇ ಮಂಡಳಿ ಅಥವಾ ಸಮಿತಿಯ ರಚನೆಯನ್ನು ಮಾಡಲಿಲ್ಲ. ಈ ಅನಾಥಾಲಯವನ್ನು ಸ್ಥಾಪಿಸಲು ಅವರು ಸರ್ಕಾರ ಅಥವಾ ತಮ್ಮ ಬ್ರಾಹ್ಮಣ ಸಹೋದ್ಯೋಗಿಗಳ ಸಹಾಯವನ್ನು ಕೂಡ ಪಡೆಯಲಿಲ್ಲ. ಕಾರಣ ತಮ್ಮ ಸಹೋದರಿಯರನ್ನು, ತಾಯಂದಿರನ್ನು ಮಾನಸಿಕ ಹಿಂಸೆ ಹಾಗೂ ಕೇಶಮುಂಡನಗಳಿಂದ ಉಳಿಸಲಾಗದಂತಹ ಮನುಷ್ಯರು ಅವರ ಸಂಸ್ಥೆಯ ಸದಸ್ಯರಾಗಲು ಅಯೋಗ್ಯರಾಗಿರುವರು ಎಂದು ಫುಲೆಯವರು ಬ್ರಾಹ್ಮಣರ ಸಹಾಯ ಕೋರಲಿಲ್ಲ. ಅನೇಕ ವಿಧವೆಯರು ತಮ್ಮ ಮಕ್ಕಳಿಗೆ ಸುರಕ್ಷಿತವಾಗಿ ಜನ್ಮ ನೀಡಿದರು. ಈ ರೀತಿ ಅನಾಥಾಲಯವು ಉದಾತ್ತ ಕಾರ್ಯಗಳನ್ನು ಮಾಡುತ್ತಾ ಮುಂದುವರೆದಂತೆ ಅದರಲ್ಲಿ ಪ್ರತಿಷ್ಠಿತ ವ್ಯಕ್ತಿಗಳು ತಮ್ಮ ಉತ್ಸಾಹವನ್ನು ತೋರಿಸಲು ಪ್ರಾರಂಭಿಸಿದರು. ಈ ರೀತಿಯಾಗಿ ಜ್ಯೋತಿ ಬಾ ಫುಲೇ ಅವರು ವಿಧವೆಯರ ಸಮಸ್ಯೆಗಳ ವಿರುದ್ಧ ಹೋರಾಡಿ ಅವರಿಗೆ ಒಂದು ನೆಲೆದೊರಕುವಂತೆ ಮಾಡಿದರು.

"೧೮೭೫ರಲ್ಲಿ ಆರ್ಯ ಸಮಾಜದ ಸ್ಥಾಪಕರಾದ ದಯಾನಂದ ಸರಸ್ವತಿಯವರು ಶೋಷಣೆಗೆ ಒಳಗಾಗುತ್ತಿದ್ದ ಸ್ತ್ರೀಯರ ಸ್ಥಿತಿಗತಿಗಳತ್ತ ಗಮನಹರಿಸಿದರು. ಇವರು ಲಾಹೋರಿನಲ್ಲಿ ಹಲವಾರು ವಿಧವಾ ವಿವಾಹಗಳನ್ನು ನಡೆಸಿದರು. ವಿಧವಾ ವಿವಾಹವನ್ನು ತಮ್ಮ ಪ್ರಮುಖ ಕಾರ್ಯಕ್ರಮವನ್ನಾಗಿ ಹಾಕಿಕೊಂಡರು ದಯಾನಂದ ಸರಸ್ವತಿ ಇವರು ವಿಧವಾ ವಿವಾಹದ ಬಗ್ಗೆ ಸಾರ್ವಜನಿಕರನ್ನು ಉತ್ತೇಜಿಸುವುದಕ್ಕಾಗಿ ಲೇಖನಗಳನ್ನು ಪ್ರಕಟಿಸಿದರು."[೧೭] ಈ ರೀತಿ ಹೃದಯಹೀನ ಆಚರಣೆಗಳಿಂದಲೂ, ಅಸಂಬದ್ಧ ಪದ್ಧತಿಗಳಿಂದಲೂ ಕುರೂಪಗೊಂಡಿದ್ದ ಹಿಂದೂ ಧರ್ಮವನ್ನು ಮುಕ್ತಗೊಳಿಸಿ ವೇದಕಾಲೀನ ಯುಗಕ್ಕೆ ಭಾರತವನ್ನು ಕೊಂಡೊಯ್ಯುವ ಕೆಲಸದಲ್ಲಿ ಆರ್ಯ ಸಮಾಜ ತೊಡಗಿತು. ಅಲ್ಲದೆ

ಅಸ್ಪೃಶ್ಯತೆಯ ನಿವಾರಣೆ, ಸ್ತ್ರೀ ಶಿಕ್ಷಣದ ಜೊತೆಗೆ ವಿಧಾವ ವಿವಾಹ, ಬಾಲ್ಯವಿವಾಹ ನಿಷೇಧ ಮುಂತಾದ ಸಾಮಾಜಿಕ ಸಮಸ್ಯೆಗಳನ್ನು ನಿವಾರಿಸುವಲ್ಲಿ ಆರ್ಯ ಸಮಾಜವು ದೇಶದಲ್ಲಿ ಧಾರ್ಮಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಚಳುವಳಿಗೆ ಕಾರಣವಾಯಿತು.

ಸ್ತ್ರೀ ಶಿಕ್ಷಣ, ವಿಧವಾ ವಿವಾಹದಂತಹ ಸಾಮಾಜಿಕ ಸಮಸ್ಯೆಗಳ ವಿರುದ್ಧ ಧೋಂಡೋ ಕೇಶೋಪಂತ ಕರ್ವೆಯವರು ಹೋರಾಡಿದರು. ಇವರು ಸ್ವತಃ ವಿಧವೆಯನ್ನು ವಿವಾಹವಾದರು. "ವಿಧವಾ ವಿವಾಹದ ಬಗ್ಗೆ ಕರ್ವೆಯವರು ಜನರಲ್ಲಿ ಅರಿವು ಮೂಡಿಸಿದರು. ದೇಶದ ಬೇರೆ ಬೇರೆ ಭಾಗಗಳಿಂದ ವಿಧವಾ ವಿವಾಹದ ಬಗ್ಗೆ ಪ್ರೀತಿ, ಶ್ರದ್ಧೆ ಇರುವ ಮತ್ತು ಅದನ್ನು ಸಮರ್ಥಿಸುವ ವ್ಯಕ್ತಿಗಳನ್ನು ಆಹ್ವಾನಿಸಿ ವಾರ್ಧಾದಲ್ಲಿ ಮೊದಲು ಸಭೆ ಕರೆದರು. ೧೮೯೩ರ ಡಿಸೆಂಬರ್ ೩೧ರಂದು ನಡೆದ ಈ ಸಭೆಯಲ್ಲಿ ಸಧ್ಯಕ್ಕೆ ವಿಧವಾ ವಿವಾಹಕ್ಕಾಗಿ ಮಾತ್ರ ಕೆಲಸ ಮಾಡುವುದು ಎಂದು ನಿರ್ಧರಿಸಿ ವಿಧವಾ ವಿವಾಹ ಸಂಘವನ್ನು ಸ್ಥಾಪಿಸಿದರು."[೧೮] ವಿಧವಾ ವಿವಾಹದ ವ್ಯಕ್ತಿಗಳು ವಿಧವಾ ವಿವಾಹವನ್ನು ಪ್ರೋತ್ಸಾಹಿಸುವವರು ಹಾಗೂ ವಿಧವಾ ವಿವಾಹವಾದ ವ್ಯಕ್ತಿಗಳೊಡನೆ ಯಾವರೀತಿಯ ತೊಂದರೆಯಿಲ್ಲದೆ, ಊಟ ಮಾಡಲು ಒಪ್ಪುವಂಥವರನ್ನು ಮಾತ್ರ ಈ ಸಂಘದ ಸದಸ್ಯರನ್ನಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿದರು.

ವಿಧವಾ ವಿವಾಹ ಸಂಘದ ಮೊದಲ ಕಾರ್ಯಕ್ರಮವಾಗಿ ಕರ್ವೆಯವರು ವಿಧವಾ ವಿವಾಹದಿಂದ ಹುಟ್ಟಿದ ಮಕ್ಕಳಿಗೆ ಶಿಕ್ಷಣ ಹಾಗೂ ವಸತಿಗ್ರಹ ಏರ್ಪಾಡು ಮಾಡಿದರು. ನಂತರ ವಿಧವಾಶ್ರಮಗಳನ್ನು ತೆರೆಯಲು ಊರಿನಿಂದ ಊರಿಗೆ ಸಂಚರಿಸಿ ವಿಧವಾಶ್ರಮಕ್ಕಾಗಿ ಹಣ ಸಂಗ್ರಹಿಸಿದರು. ಇದರಿಂದ ಅನೇಕ ವಿಧವೆಯರು ಆಶ್ರಮಕ್ಕೆಂದು ದುಡಿಯಲು ಮುಂದೆ ಬಂದರು. "ಅಷ್ಟೇ ಅಲ್ಲದೆ ಅವರ ಆಶ್ರಯದಲ್ಲಿ ಬೆಳಕಿಗೆ ಬಂದ ವಿಧವಾ ಹೆಣ್ಣು ಮಕ್ಕಳಾದ ಪಾರ್ವತಿಬಾಯಿ, ಸೀತಾಬಾಯಿ ಅಣ್ಣಿಗೇರಿ ಹಾಗೂ ಸ್ವತಃ ಕರ್ವೆಯವರ ಪತ್ನಿಯಾದ ಆನಂದಿಬಾಯಿ ಮುಂತಾದವರು ಸ್ವತಂತ್ರವಾಗಿ ಸಂಘಟಿತರಾಗಿ ಕೆಲಸ ಮಾಡಲು ಪ್ರಯತ್ನಿಸಿದರು."[೧೯]

ವಿಧವೆಯರ ಪುನರ್ವಿವಾಹ ಮಾಡಲು ಅವರನ್ನು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿದವರು ಗಾಂಧಿಜೀ. ಇವರ ಕಾಲದಲ್ಲಿ ಜನಜೀವನವು ನೆಮ್ಮದಿಯಾಗಿ ಸಾಗುತ್ತಿದ್ದರೂ ದಾಸ್ಯಭಾವದ ಚಿಂತೆ ವಿಚಾರವಂತರನ್ನು ಕಾಡುತ್ತಲೇ ಇತ್ತು. ಈ ಕಾಲದಲ್ಲಿ ಹೆಣ್ಣು ಮಕ್ಕಳು ತಮ್ಮ ಬಂಧನದಿಂದ ಮುಕ್ತರಾಗಿ ಹೊರಬರಲು ಕಾರಣರಾದವರೇ ಗಾಂಧಿಜೀ. ಇವರು ಹೆಣ್ಣುಮಕ್ಕಳ ಬಗ್ಗೆ ಒಳ್ಳೆಯ ಮಾತುಗಳನ್ನು ಆಡಿದರು, ಜೊತೆಗೆ ಅವರಿಗೆ ಗೌರವವನ್ನು ನೀಡಿದರು. ಅವರು ಹೆಣ್ಣು ಮಕ್ಕಳನ್ನು ಹೊರಗೆ ತಂದದ್ದು ಭಾರತ ದೇಶದ ಸ್ವಾತಂತ್ರವೆಂಬ ಪವಿತ್ರಕಾರ್ಯಕ್ಕೆ. ಇಲ್ಲಿ ಮಹಿಳೆಯರಿಗೆ ಯಾವುದೇ ರೀತಿಯ ಕಳಂಕವೂ ತಟ್ಟದಂತೆ, ಸತ್ಯ, ಅಹಿಂಸೆ, ತ್ಯಾಗ, ಮನೋಭಾವದಿಂದ ಅವರ ಮನ

ಸೆಳೆದರು. ಗಾಂಧೀಜಿಯವರ ಕೂಗಿಗೆ ಓಗೊಟ್ಟು ಮಹಿಳೆಯರು ತಮಗೆ ನಿರ್ಮಿಸಿದ್ದ ಬಲೆಯನ್ನು ಧೈರ್ಯದಿಂದ ಕಿತ್ತೊಗೆದು ಮುನ್ನುಗ್ಗಿದರು. "ನಮ್ಮ ಹೆಣ್ಣು ಮಕ್ಕಳು ಹೊರಗಿನ ಪ್ರಪಂಚಕ್ಕೆ ಕಾಲಿರಿಸಿದ ಕಾಲವೆಂದರೆ ಕ್ರಿ.ಶ.೨೦ನೇ ಶತಮಾನದ ಆದಿಭಾಗದಲ್ಲಿ ಎಂದು ಧಾರಾಳವಾಗಿ ಹೇಳಬಹುದು."[೨೦]

ಈ ಕಾಲದಲ್ಲಿ ಮೂಲೆಗುಂಪಾಗಿ ಬಿದ್ದಿದ್ದ ಅನೇಕ 'ಸಕೇಶಿ' ವಿಧವೆಯರು ಈ ಅವಕಾಶದ ಉಪಯೋಗವನ್ನು ಪಡೆದುಕೊಂಡು ತಮ್ಮ ಕೀಳರಿಮೆಯ ಭಾವದಿಂದ ಸ್ವಲ್ಪ ಮಟ್ಟಿಗೆ ಈಚೆಗೆ ಸರಿದರು. ಅಂದರೆ ಎಲ್ಲಾ ವಿಧವೆಯರು ಚಳುವಳಿ ಸತ್ಯಾಗ್ರಹ ಎಂದು ಹೋಗದೆ ಇದ್ದರೂ, 'ಗತಿ' ತಪ್ಪದ ತಮ್ಮ ಬಾಳನ್ನು ಕಳೆಯಲು ವಿದ್ಯಾಭ್ಯಾಸಕ್ಕೆ, ಸಣ್ಣ ಪುಟ್ಟ ಕೆಲಸಗಳಿಗೆ ಅಂದರೆ ಹೆಚ್ಚಾಗಿ ಶಿಕ್ಷಕಿಯರ, ದಾದಿಯರ ಹುದ್ದೆಗಳಿಗೆ ಹೋಗಲು ಪ್ರಾರಂಭಿಸಿದರು. ಆಗಲೂ ಸಹ ವಿಧವೆಯರನ್ನು ಸಮಾಜವು ಗೌರವದಿಂದ ನೋಡುತ್ತಿರಲಿಲ್ಲ. ವಿಧವೆಯರು ಮನೆಯ ಒಳಗಿನ ಮತ್ತು ಹೊರಗಿನ ವಾತಾವರಣಕ್ಕೆ ಹೊಂದಿಕೊಂಡು ನಡೆಯಬೇಕಾದ ಪರಿಸ್ಥಿತಿ ಬಂದಿತು. ವಿಧವೆ ಅಂದರೆ ಒಂದು ಬಗೆಯ ಸಂಶಯಗಳಿಂದಲೇ ನೋಡುವ ರೂಢಿ ಬೆಳೆದು ಬಂದಿರುವುದರಿಂದ ಸಮಾಜದ ಈ ಕೊಂಕು ನೋಟವನ್ನು ಅವಳು ಸಹಿಸಲೇ ಬೇಕಾಗಿತ್ತು. ಆಗಲು ಸಹ ಭಯ, ಸಂಕೋಚಗಳು ವಿಧವೆಯರನ್ನು ಕಾಡದೇ ಬಿಡಲಿಲ್ಲ. ಇದ್ದ ಪರಿಸ್ಥಿತಿಯಲ್ಲಿಯೆ ಸ್ವಲ್ಪ ಉತ್ತಮವಾದ ಜೀನ ನಡೆಸಲು ಪ್ರಾರಂಭಿಸಿದಳು. ಮುಂದುವರೆದ ಜನಾಂಗದಲ್ಲಿ ಹೆಣ್ಣು ಮಕ್ಕಳನ್ನು ವಿದ್ಯಭ್ಯಾಸಕ್ಕೆ ಕಳುಹಿಸಲು ಆಸಕ್ತರಾಗಿದ್ದರು. ಕಾಲ ಮುಂದುವರಿದಂತೆ ಅಕ್ಷರ ವಿದ್ಯೆಯಿಂದ ಅಜ್ಞಾನವು ಸ್ವಲ್ಪ ಮಟ್ಟಿಗೆ ಸರಿಯುತ್ತಾ ಬಂದಿತು. 'ಸಕೇಶಿ' ವಿಧವೆಯರು ಓದು, ಕೆಲಸ ಎಂಬ ಕಾರಣದಿಂದ ಮನೆಬಿಟ್ಟು ಓಡಾಡಿದಾಗ ಅವರ ಮೊದಲ ವೇಷ ಭೂಷಣದಲ್ಲಿ ಸ್ವಲ್ಪ ಬದಲಾವಣೆಗಳು ಆದವು. ಅವರ ಮುಖವನ್ನು ನೋಡಿ ಸಹಿಸಿಕೊಳ್ಳುವ ಮಟ್ಟಿಗೆ ಸಮಾಜ ಬದಲಾಗಿತ್ತು. ಈ ರೀತಿ ಸಾಮಾಜಿಕ ಸ್ಥಿತಿಯಲ್ಲಿ ವಿಧವೆಯರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು.

ಗಾಂಧೀಜಿಯವರು ವಿಧವೆಯರಿಗೆ ಸ್ವತಂತ್ರ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡುವುದರ ಜೊತೆಗೆ ಅವರಿಗೆ ಮರುವಿವಾಹವಾಗುವ ಅವಕಾಶವನ್ನು ನೀಡಿದರು. "೩೦-೭-೧೯೨೭ರಂದು ಮೈಸೂರಿನಲ್ಲಿ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು. ಹಿಂದೂ ಧರ್ಮದಲ್ಲಿ ವಿಧವೆಗೆ ಒಂದು ಪವಿತ್ರ ಸ್ಥಾನವಿದೆ. ಆದರೆ ಪ್ರಾಚೀನ ಹಿಂದೂ ವಿಧವೆಯರು ಇಂದಿನ ವಿಧವೆಯರ ದುಃಖ ಸ್ಥಿತಿಯಲ್ಲಿರಲಿಲ್ಲ. ಹದಿನೈದು ವಯಸ್ಸಿನ ಹುಡುಗಿ ವಿಧವೆಯಾಗಿರುವುದನ್ನು ನಾನು ಭಾವಿಸಲಾರೆ. ಹಣದ ಆಸೆಯಿಂದಲೋ ಇತರ ಸೌಲಭ್ಯಗಳ ಲೋಭದಿಂದಲೋ ತನ್ನ ತಂದೆ-ತಾಯಿಗಳಿಂದ ವಿವಾಹ ಮಾಡಲ್ಪಟ್ಟ ಹುಡುಗಿ ವಿವಾಹಿತಳಲ್ಲವೆಂದೇ ತನ್ನ ಭಾವನೆ. ಅಂಥ ಹುಡುಗಿ ವಿಧವೆಯಾದರೆ, ಪುನರ್ವಿವಾಹ ಮಾಡವುದು ತಂದೆ-ತಾಯಿಗಳ ಕರ್ತವ್ಯ. ಇತರ ವಿಧವೆಯರು ಪರಿಶುದ್ಧ ವೈಧವ್ಯ ಜೀವನವನ್ನು ನಡೆಸಲು

ಸಾಧ್ಯವಿಲ್ಲವೆನಿಸಿದರೆ, ಇಂಥ ಪೇಚಿನಲ್ಲಿರುವ ವಿಧುರರು ಪುನರ್ವಿವಾಹ ಮಾಡಿಕೊಳ್ಳಲು ಹಕ್ಕನ್ನು ಹೊಂದಿರುವಂತೆ ಅವರೂ ಹೊಂದಿರತಕ್ಕುದ್ದು."[೨೦] ಎಂದು ಗಾಂಧಿಜೀ ಹೇಳಿದ್ದಾರೆ. ಇನ್ನೊಂದು ಕಡೆ ಗಾಂಧಿಜೀಯವರು ಏನು ಅರಿಯದ ಬಾಲೆಯನ್ನು ಅವಳಿಗೆ ತಿಳುವಳಿಕೆ ಕೊಡದೆ, ಅವಳ ಒಪ್ಪಿಗೆಯಿಲ್ಲದೆ, ಅವಳ ಶ್ರೇಯೋಭಿವೃದ್ಧಿಯನ್ನು ಕುರಿತು ವಿವೇಚಿಸದೆ ವಿವಾಹ ಮಾಡುವುದು, ವಿವಾಹವೇ ಅಲ್ಲ. ಅದೊಂದು ಸಂಸ್ಕಾರ ಕೂಡ ಅನ್ನಿಸುವುದಿಲ್ಲ. ಆದ್ದರಿಂದ ಆಕೆಯ ಪುನರ್ವಿವಾಹವು ಅಗತ್ಯ ಕರ್ತವ್ಯ ಎನ್ನಿಸುತ್ತದೆ. ಇಂಥ ಸಂದರ್ಭಗಳಲ್ಲಿ ಅವುಗಳನ್ನು ಪುನರ್ವಿವಾಹವೆಂದು ಕರೆಯುವುದೂ ತಪ್ಪೆನಿಸುತ್ತದೆ. ಆ ಅಪ್ರಾಪ್ತ ವಯಸ್ಕಳು ನಿಜವಾಗಿಯೂ ವಿವಾಹಿತಳಾದಂತೆಯೇ ಅಲ್ಲ. ಆದುದರಿಂದ ಗಂಡನೆಂದು ಪರಿಗಣಿತನಾದವನು ಮರಣ ಹೊಂದಿದರೆ ತಂದೆ-ತಾಯಿಗಳು ಯೋಗ್ಯವರನನ್ನು ಹುಡುಕಿ ಆಕೆಯ ಬಾಳನ್ನು ಸುಗಮಗೊಳಿಸುವುದು ಅತ್ಯಂತ ಸಹಜವೂ ಮತ್ತು ಕರ್ತವ್ಯಪೂರ್ಣವೂ ಆಗುತ್ತದೆ ಎನ್ನುವರು. ಈ ರೀತಿಯಾಗಿ ಗಾಂಧಿಜೀಯವರು ವಿಧವೆಯರಿಗೆ ಪುನರ್ವಿವಾಹದ ಜೊತೆಗೆ ಅವರನ್ನು ಸ್ವತಂತ್ರ ಹೋರಾಟಗಳಲ್ಲಿ ಭಾಗವಹಿಸಲು ತೊಡಗಿಸಿಕೊಂಡರು. ಅವಳನ್ನು ಮನೆಯ ಮೂಲೆಯಲ್ಲಿಯೇ ಕೂಡುವಂತೆ ಮಾಡದೇ ಅವಳಿಗೂ ಸಮಾಜದಲ್ಲಿ ಎಲ್ಲ ಮಹಿಳೆಯರ ಹಾಗೆ ಸ್ಥಾನಮಾನಗಳನ್ನು ಹೊಂದುವಂತೆ ವಿಧವೆಯರ ಸಮಸ್ಯೆಗಳ ಬಗ್ಗೆ ಹೋರಾಡಿದರು.

ಇತ್ತೀಚಿನವರೆಗೆ ವಿಧವೆಯರನ್ನು ಒಳಗೊಂಡು ಹಿಂದೂ ಮಹಿಳೆಯರಿಗೆ ಹುಟ್ಟಿದ ಮನೆಯಲ್ಲಾಗಲೀ ಸೇರಿದ ಮನೆಯಲ್ಲಾಗಲೀ ಕುಟುಂಬದ ಯಾವ ಆಸ್ತಿಯಲ್ಲೂ ಹಕ್ಕಿರಲಿಲ್ಲ. ಕೇವಲ ಜೀವನಾಂಶವನ್ನು ಕೊಡಲಾಗುತ್ತಿತ್ತು. ೧೯೩೭ ಹಿಂದೂ ಸ್ತ್ರೀ ಆಸ್ತಿಯ ಹಕ್ಕಿನ ಕಾನೂನು. ವಿಧವೆಯರಿಗೆ ಪತಿಯ ಆಸ್ತಿಯಲ್ಲಿ ಒಂದು ಭಾಗ ಸಲ್ಲಬೇಕು ಎಂದು ವಿಧಿಸಿತು. ಈ ಕಾನೂನಿನ ಪ್ರಕಾರ ಸ್ತ್ರೀ ತನ್ನ ಪಾಲಿನ ಆಸ್ತಿಯನ್ನು ಅಖಂಡವಾಗಿಟ್ಟುಕೊಂಡಿರಬಹುದು ಮತ್ತು ಅದರ ಫಲವನ್ನು ಅವಳು ಅನುಭವಿಸಬಹುದಾಗಿತ್ತು. ಇತ್ತೀಚಿನ ವರ್ಷಗಳಲ್ಲಿ ಸ್ತ್ರೀಪುರುಷರಿಗೆ ಸಮಾನ ಕಾನೂನನ್ನು ಮಾಡಲಾಯ್ತು. ಹಿಂದೂ ವಿವಾಹ ಕಾಯ್ದೆಯು ೧೯೫೫ರಲ್ಲಿ ಜಾರಿಗೆ ಬಂದಿತು. ಇದರ ಪ್ರಕಾರ ಸ್ತ್ರೀ ಮತ್ತು ಪುರುಷರಿಬ್ಬರಿಗೂ ಏಕಪತಿತ್ವ ಮತ್ತು ಏಕಪತ್ನಿತ್ವವನ್ನು ವಿಧಿಸಿತು. ಹಾಗೆಯೇ ಹಿಂದೂ ಉತ್ತರಾಧಿಕಾರಿ ಕಾಯ್ದೆ ೧೯೫೬ರಲ್ಲಿ ಜಾರಿಗೆ ಬಂದಿತು. ಈ ಕಾಯ್ದೆಯ ಪ್ರಕಾರ ಕುಟುಂಬದ ಹಿರಿಯನು ಸತ್ತ ಬಳಿಕ ಕುಟುಂಬದ ಪಿತ್ರಾರ್ಜಿತ ಆಸ್ತಿಗೆ ಆತನ ಮಗ, ಮಗಳು, ವಿಧವೆ ಪತ್ನಿ ಮತ್ತು ತಾಯಿ ಉತ್ತರಾಧಿಕಾರಿಗಳಾಗುತ್ತಾರೆ. ಆದರೆ ಒಬ್ಬರಿಗಿಂತ ಹೆಚ್ಚು ವಿಧವೆಯರಿದ್ದರೆ ಅವರೆಲ್ಲರು ಒಟ್ಟಿಗೆ ಒಂದು ಭಾಗವನ್ನು ಹಂಚಿಕೊಳ್ಳಬೇಕಾಗುತ್ತದೆ. ಹಿಂದೂ ಅಪ್ರಾಪ್ತ ವಯಸ್ಕ ಮತ್ತು ಪೋಷಕತ್ವದ ಕಾಯಿದೆಯೂ ೧೯೫೬ರಲ್ಲಿ ಜಾರಿಗೆ ಬಂದಿತು. ಈ ಕಾಯ್ದೆಯ ಪ್ರಕಾರ ವಿಧವೆಯಾದ ನಂತರ ತಾಯಿಯೇ ಅಪ್ರಾಪ್ತ ವಯಸ್ಕ ಮಗ ಅಥವಾ ಮಗಳ ಪೋಷಕಿಯಾಗಿರುತ್ತಾಳೆ.

ಹಿಂದೂ ದತ್ತಕ ಮತ್ತು ನಿರ್ವಹಣೆ ಕಾಯ್ದೆಯು ೧೯೫೬ರಲ್ಲಿ ಜಾರಿಗೆ ಬಂದಿತು. ಈ ಕಾಯ್ದೆಯ ಪ್ರಕಾರ ಅವಿವಾಹಿತ ಹಿಂದೂ ಮಹಿಳೆ, ವಿಚ್ಛೇದಿತ ಸ್ತ್ರೀ ಅಥವಾ ವಿಧವೆಯರು ಮಗ ಅಥವಾ ಮಗಳನ್ನು ದತ್ತು ಪಡೆಯಬಹುದಾಗಿದೆ. ಹಿಂದೆ ಹೆಣ್ಣು ಮಗುವನ್ನು ದತ್ತುಪಡೆಯುವ ಪದ್ಧತಿ ಇರಲಿಲ್ಲ. ಏಕೆಂದರೆ ಗಂಡು ಮಕ್ಕಳು ಮಾತ್ರವೇ ತನ್ನ ಪೂರ್ವಜರನ್ನು ಕರ್ಮಗಳಿಂದ ಮುಕ್ತರನ್ನಾಗಿಸಿ ಅವರಿಗೆ ಮೋಕ್ಷ ದೊರಕಿಸಿಕೊಡುತ್ತಾರೆ ಎನ್ನುವುದು ಹಿಂದೂಗಳ ನಂಬಿಕೆ. ಆದ್ದರಿಂದ ಹಿಂದೂ ಪುರುಷರಿಗೆ ಮಾತ್ರವೇ ದತ್ತಕ ಪಡೆಯಲು ಹಕ್ಕಿತ್ತು. ಆದರೆ ಈ ಕಾಯ್ದೆಯ ಪ್ರಕಾರ ವಿಧವೆಯಾದವಳು ಹೆಣ್ಣು ಮಗುವನ್ನು ಅಥವಾ ಗಂಡು ಮಗುವನ್ನು ದತ್ತು ಸ್ವೀಕರಿಸಬಹುದು.

ಹೀಗೆ ವಿಧವಾ ಮಹಿಳೆಗೆ ಅನುಕೂಲವಾಗುವಂತೆ ಅನೇಕ ಶಾಸನಗಳು ಜಾರಿಗೆ ಬಂದವು. ಜೊತೆಗೆ ವಿಧವೆಯರ ಆಚರಣೆಗಳನ್ನು ವಿರೋಧಿಸಲು ಕೆಲವು ಮಹಿಳಾ ಮಂಡಳಿಗಳು ಕೆಲಸಮಾಡುತ್ತಿರುವುದು ಕಂಡುಬಂದಿದೆ. "ಶಿವಮೊಗ್ಗದ ವಾಸವಿ ಮಹಿಳಾ ಮಂಡಳಿಯು ವೈಶ್ಯಜನಾಂಗದಲ್ಲಿ ಮಹಿಳೆ ವಿಧವೆಯಾದರೆ ತಾಳಿ ತೆಗೆಯುವ, ಕುಂಕುಮ ಅಳಿಸುವ ಆಚರಣೆಗೆ ತಡೆ ತಂದಿದೆ. ಬೆಂಗಳೂರಿನ ವೈಶ್ಯ ಮಹಿಳಾ ಮಂಡಳಿಯೂ ಇದೆ ನಿಟ್ಟಿನಲ್ಲಿ ಕೆಲಸ ಮಾಡುತ್ತಿದೆ. ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ ಲೇಖಕಿಯರ ಸಂಘವು ವಿಧವೆಯರಿಗೆ ಕರಿಮಣಿ ತೆಗೆಯುದಂತೆ, ಕುಂಕುಮವಿಡುವಂತೆ ಕೇಳಿಕೊಳ್ಳುತ್ತಿದೆ. ಹಾಗೆಯೇ ಗುಲಬರ್ಗಾದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ವಿಧವೆಯರಿಗೆ ಮರುವಿವಾಹದ ಜೊತೆಗೆ ವಿಧವಾವೇತನ ನೀಡಲಾಗುತ್ತಿದೆ. ಯಾವುದೇ ರೀತಿಯ ಜೀವನಾಧಾರವೂ ಇಲ್ಲದ ನಿರ್ಗತಿಕ ವಿಧವೆಯರಿಗೆ ಹಣಕಾಸು ನೆರವು ನೀಡುವುದರ ಮೂಲಕ ಸಾಮಾಜಿಕ ಭದ್ರತೆಯನ್ನು ಒದಗಿಸುವುದು ವಿಧಾವಾ ವೇತನವು ಪ್ರತಿತಿಂಗಳಿಗೆ ೧೦೦ ರೂ ನಿರ್ಗತಿಕ ವಿಧವೆಯರಿಗೆ ನೀಡಲಾಗುತ್ತಿದೆ. ವಿಧವಾ ವೇತನ ಪಡೆಯಲು

೧. ವಿಧವೆಯು ೧೮ ವರ್ಷಕ್ಕೆ ಮೇಲ್ಪಟ್ಟ ವಯಸ್ಸಿನವರಾಗಿದ್ದು, ಸಂಕಷ್ಟ ಸ್ಥಿತಿಯಲ್ಲಿದ್ದು, ಹಣಕಾಸಿನ ನೆರವಿನ ಅವಶ್ಯಕತೆ ಇರಬೇಕು.

೨. ವಿಧವೆಯಾದವಳು ಅವಳ ಸಂಬಂಧಿಕರ ಆಶ್ರಯವಿಲ್ಲದೆ ಮತ್ತು ೬.೦೦೦ರೂಗಳಿಗೆ ಮೀರಿದ ವಾರ್ಷಿಕ ಆದಾಯ ಹೊಂದಿಲ್ಲದಿದ್ದ ಸ್ತ್ರೀ ಆಗಿರಬೇಕು.

೩. ಅರ್ಜಿದಾರಳು ಅಥವಾ ಆಕೆಯ ಮರಣ ಹೊಂದಿದ ಪತಿಯು ಅರ್ಜಿ ದಿನಾಂಕದಿಂದ ಹಿಂದಿನ ನಿರಂತರ ಮೂರು ವರ್ಷಗಳ ಅವಧಿಗೆ ಕಡಿಮೆ ಇಲ್ಲದಂತೆ ಕರ್ನಾಟಕ ರಾಜ್ಯದ ನಿವಾಸಿಯಾಗಿರಬೇಕು.

೪. ಅಂಗವಿಕಲರ ವೇತನ, ವೃದ್ಧಾಪ್ಯವೇತನ ಮುಂತಾದ ಯೋಜನೆಗಳ ಅಡಿ ನಿರ್ವಹಣಾ ಭತ್ಯೆಗೆ ಅರ್ಹವಾಗಿರುವ ವಿಧವೆಯರು ವಿಧವಾ ವೇತನಕ್ಕೆ ಅರ್ಹರಾಗಿರುವುದಿಲ್ಲ.

೫. ಮೃತರಾಗುವವರೆಗೆ ಅಥವಾ ಪುನರ್ವಿವಾಹವಾಗುವವರೆಗೆ ಅಥವಾ ಉದ್ಯೋಗ ಪಡೆದು ವಾರ್ಷಿಕ ಆದಾಯ ರೂ. ೬,೦೦೦ ಕ್ಕಿಂತ ಹೆಚ್ಚಿಗೆ ಪಡೆಯುವವರೆಗೆ ವಿಧವಾ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜೊತೆಗೆ ಕರ್ನಾಟಕ ಸರ್ವೋದಯ ಸೇವಾ ಸಂಘವು

೧. ವಿಧವೆಯ ಮಹಿಳೆಯರಿಗೆ ಊಟ, ವಸತಿ ಹಾಗೂ ಉಚಿತ ಚಿಕಿತ್ಸೆ ಕೊಡುತ್ತಿದ್ದಾರೆ.

೨. ವಿಧವೆಯರಿಗೆ ಹೊಲಿಗೆ ತರಬೇತಿ, ಕಸೂತಿ ಹಾಕುವುದು ಮತ್ತು ಇತರ ಕೆಲಸವನ್ನು ವೃತ್ತಿ ಪರವಾದ ತರಬೇತಿ ಕೊಡಿಸಿ ಸ್ವಾವಲಂಬಿಯಾಗಿ ಬಾಳುವಂತೆ ಮಾಡುತ್ತಿದೆ.

೩. ವಿಧವೆಯ ಮಹಿಳೆಯರಿಗೆ ಸಾಮಾನ್ಯ ತಿಳುವಳಿಕೆ ಮತ್ತು ಮಾನಸಿಕ ಪರಿವರ್ತನೆ ನೀಡಲಾಗುತ್ತಿದೆ.

ವಿಧವೆಯರ ಸಮಸ್ಯೆಗಳನ್ನು ಬಗೆಹರಿಸಲು ಅನೇಕ ಕಾಯ್ದೆ ಕಾನೂನುಗಳು ಜಾರಿಗೆ ಬಂದಿವೆ. ಜೊತೆಗೆ ಅನೇಕ ಸಂಘ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಆದ್ದರಿಂದ ವಿಧವೆಯು ಮೊದಲಿನ ಹಾಗೆ ಕಷ್ಟಕರವಾದ ಜೀವನವನ್ನು ನಡೆಸದೆ ಸ್ವಲ್ಪಮಟ್ಟಿಗಾದರು ಒಳ್ಳೆಯ ಜೀವನವನ್ನು ಸಾಗಿಸುತ್ತಿದ್ದಾಳೆ. ನಗರದ ಮಹಿಳೆಯು ಅಲ್ಪಸ್ವಲ್ಪವಾದರೂ ಕಾನೂನಿನ ನೆರವನ್ನು ಪಡೆದಿದ್ದಾಳೆ. ವಿದ್ಯಾಭ್ಯಾಸವನ್ನು ಪಡೆದು ಉದ್ಯೋಗವನ್ನು ಮಾಡುತ್ತಿದ್ದಾಳೆ. ಆದರೆ ಇನ್ನು ಗ್ರಾಮೀಣ ಪ್ರದೇಶದ ಮಹಿಳೆಯು ಅಶಿಕ್ಷಿತಳಾಗಿರುವುದರಿಂದ ಅವಳು ಮನೆಯ ಹೊರಗೆ ಕೆಲಸಕ್ಕೆ ಹೋಗದೆ, ಮನೆಯ ನಾಲ್ಕು ಗೋಡೆಗಳ ಮಧ್ಯೆಯೇ ವಾಸಿಸುತ್ತಿದ್ದಾಳೆ. ಅಲ್ಲದೆ ಅವಳು ಯಾವುದೇ ರೀತಿಯ ಕಾನೂನಿನ ನೆರವನ್ನು ಪಡೆದುಕೊಂಡಿಲ್ಲ. ಅವಳಿಗೆ ಕಾನೂನಿನ ಬಗ್ಗೆ ಅರಿವೆ ಇಲ್ಲ. ಅಲ್ಲದೆ ಸಂಪ್ರದಾಯಕ್ಕೆ ಒಳಪಟ್ಟಿರುವುದರಿಂದ ಅವಳು ಕೆಲವೊಂದು ಆಚರಣೆಗಳನ್ನು ಆಚರಿಸುವ ಪರಿಸ್ಥಿತಿಯು ಗ್ರಾಮೀಣ ಪ್ರದೇಶದ ಮಹಿಳೆಯದಾಗಿವೆ. ಅಮಂಗಲೆಯೆಂದು ಮನೆಯಲ್ಲಿ ಕೂಡದೇ ಎಲ್ಲ ಕೆಲಸಗಳಲ್ಲಿ ಆಸಕ್ತಿ ತೋರಿಸುತ್ತಿದ್ದಾಳೆ. ಸಂಪ್ರದಾಯ ತೊರೆದು ಕೇಶ ಮುಂಡನ ಮಾಡಿಸಿಕೊಳ್ಳದೆ, ಕೂದಲುಬಿಟ್ಟು, ಹೂ, ಬಳೆ, ಕುಂಕುಮಗಳನ್ನು ಧರಿಸುತ್ತಿದ್ದಾಳೆ. ವಿಧವೆಯು ಹೀನಾಯ ಸ್ಥಿತಿಯಲ್ಲಿ ಬದುಕದೇ ಮೊದಲಿಗಿಂತ ಉತ್ತಮವಾದ ಬದುಕನ್ನು ಬದುಕುತ್ತಿದ್ದಾಳೆ. ಜೊತೆಗೆ ಸ್ವಾವಲಂಬಿಯಾಗಿ ಬದುಕಬಲ್ಲೆ ಎನ್ನುವ ಧೈರ್ಯವು ಕೂಡ ಬಂದಿದೆ. ಮುಂದಿನ ಅಧ್ಯಾಯದಲ್ಲಿ ವಿವಿಧ ಸಾಮಾಜಿಕ ವರ್ಗ, ಜಾತಿ, ನೆಲೆಗಳಲ್ಲಿ ವೈಧವ್ಯದ ಸ್ಥಿತಿಗತಿಗಳನ್ನು ಕ್ಷೇತ್ರ ಅಧ್ಯಯನದ ಮೂಲಕ ವಿವರಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಮಹೇಶ್ವರಪ್ಪ (ಅನು), ಭಾರತದಲ್ಲಿ ವಿವಾಹ ಮತ್ತು ಕುಟುಂಬ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೮, ಪು.೨೧೭

೨. ಅದೇ, ಪು.೨೧೮

೩. ಡಾ.ಜಿ.ಕೃಷ್ಣಪ್ಪ, ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ, ಶ್ರೀರಂಗ ಪ್ರಕಾಶನ, ಮೈಸೂರು, ೨೦೦೧, ಪು.೨೯

೪. ಮಹೇಶ್ವರಪ್ಪ (ಅನು), ಪೂರ್ವೋಕ್ತ, ಪು.೨೧೯

೫. ಗೀತಾ ಕೃಷ್ಣಮೂರ್ತಿ, ಮಹಿಳೆ ಕಾನೂನು ಮತ್ತು ರಾಜಕಾರಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೧, ಪು.೬

೬. ಎನ್.ಗಾಯತ್ರಿ, ಮಹಿಳಾ ಚಳುವಳಿಯ ಮಂಜಲುಗಳು, ನವಕರ್ನಾಟಕ ಪಬ್ಲಿಕೇಷನ್ (ಪ್ರೈ) ಲಿ ಬೆಂಗಳೂರು, ೧೯೯೮, ಪು.೧೮

೭. ಮಹೇಶ್ವರಪ್ಪ (ಅನು), ಪೂರ್ವೋಕ್ತ, ಪು.೨೨೦

೮. ಅದೇ, ಪು.೨೨೧

೯. ಎನ್.ಗಾಯತ್ರಿ, ಪೂರ್ವೋಕ್ತ, ಪು.೧೮

೧೦. ಮಹೇಶ್ವರಪ್ಪ (ಅನು), ಪೂರ್ವೋಕ್ತ, ಪು.೧೮೮

೧೧. ಅದೇ, ಪು.೧೯೦

೧೨. ಮಂಗಲಾಕಾಳೆ, ಸ್ತ್ರೀ ವಿಮೋಚನಾ ಹೋರಾಟಗಳು, ಅನಾರ್ಯ ಪ್ರಕಾಶನ, ಧಾರವಾಡ, ಪು.೫೧

೧೩. ಅದೇ, ಪು.೫೨

೧೪. ಅದೇ, ಪು.೫೨

೧೫. ಅದೇ, ಪು.೫೩

೧೬. ಅದೇ, ಪು.೫೩

೧೭. ಎನ್.ಗಾಯತ್ರಿ, ಪೂರ್ವೋಕ್ತ, ಪು.೧೭

೧೮. ಅದೇ, ಪು.೧೮

೧೯. ಅದೇ ಪು.೧೮

೨೦. ವಾಗೀಶ್ವರಿಶಾಸ್ತ್ರೀ, ಹಿಂದೂ ಸ್ತ್ರೀ ಚಿತೆಯಿಂದ ಚಿಂತೆಗೆ, ವಾಗ್ದೇವಿ ಕಲಾನಿಕೇತನ ತ್ಯಾಗರಾಜ ನಗರ, ಬೆಂಗಳೂರು ೧೯೯೫, ಪು.೧೩೩

೨೧. ಮೊ.ಕ.ಗಾಂಧಿ, ಮಹಿಳೆಯರು, ಪು.೭೩

# ಅಧ್ಯಾಯ ೫

## ವಿವಿಧ ಸಾಮಾಜಿಕ ವರ್ಗ-ಜಾತಿ ನೆಲೆಗಳಲ್ಲಿ ವೈಧವ್ಯ ಒಂದು ಕ್ಷೇತ್ರಾಧ್ಯಯನ

ಗುಲಬರ್ಗಾ ಜಿಲ್ಲೆಯಲ್ಲಿ ವಿಧವೆಯರ ಸ್ಥಿತಿಯು ಬಹಳ ಶೋಚನೀಯವಾಗಿದೆ. ಆದುದರಿಂದಲೇ ಈ ಜಿಲ್ಲೆಯ ವಿಧವೆಯರನ್ನು ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಕ್ಷೇತ್ರಕಾರ್ಯದಲ್ಲಿ ನಗರ ಪ್ರದೇಶ ಮತ್ತು ಗ್ರಾಮೀಣ ಪ್ರದೇಶದ ವಿಧವೆಯರನ್ನು ಸಂದರ್ಶಿಸಲಾಗಿದೆ. ಅಲ್ಲದೆ ಬಡವ ಶ್ರೀಮಂತ, ಮೇಲವರ್ಗ, ಕೆಳವರ್ಗ, ಮೇಲಜಾತಿ, ಕೆಳಜಾತಿಗಳ ವಿಧವೆಯರನ್ನು ಸಂದರ್ಶನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ನಗರ ಪ್ರದೇಶದಲ್ಲಿ ಒಟ್ಟು ೩೦ ಜನ ವಿಧವೆಯರನ್ನು ಮತ್ತು ಗ್ರಾಮೀಣ ಪ್ರದೇಶದಲ್ಲಿ ಒಟ್ಟು ೩೦ ಜನ ವಿಧವೆಯರನ್ನು ನಗರ ಮತ್ತು ಗ್ರಾಮೀಣ ಪ್ರದೇಶದ ಒಟ್ಟು ೬೦ ಜನ ವಿಧವೆಯರನ್ನು ಸಂದರ್ಶಿಸಲಾಗಿದೆ. ಎಲ್ಲಾ ಕ್ಷೇತ್ರಗಳಲ್ಲಿ ೧೫-೧೫ ಜನ ವಿಧವೆಯರನ್ನು ಸಂದರ್ಶಿಸಿ ಅವರ ಸ್ಥಾನಮಾನ, ಅವರ ಆರ್ಥಿಕ ಸ್ಥಿತಿಗತಿ, ಕೌಟುಂಬಿಕ ಸ್ಥಾನಮಾನ, ಅವರು ವಿಧವೆಯರಾಗಿ ಪಡುವ ಕಷ್ಟಗಳನ್ನು ಈ ಕ್ಷೇತ್ರಕಾರ್ಯದ ಮೂಲಕ ವಿಧವೆಯರನ್ನು ಸಂದರ್ಶಿಸಿ ಮಾಹಿತಿಯನ್ನು ಪಡೆಯಲಾಗಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿರುವುದರಿಂದ ಅವರು ಸಂಪ್ರದಾಯ ಕುಟುಂಬಕ್ಕೆ ಒಳಪಟ್ಟಿರುವದರಿಂದ ವಿಧವೆಯರು ತುಂಬಾಶೋಚನೀಯವಾದ ಬದುಕನ್ನು ನಡೆಸುತ್ತಲಿದ್ದಾರೆ. ಅನೇಕ ಸಂಘ-ಸಂಸ್ಥೆಗಳು, ವಿಧವೆಯರ ಸಮಸ್ಯೆಗಳ ಬಗ್ಗೆ ಕಾರ್ಯನಡೆಸುತ್ತಲಿದ್ದರು ಸಹ ವಿಧವೆಯರಿಗೆ ಕಾನೂನಿನ ಬಗ್ಗೆ ಮತ್ತು ಅವರ ಬಗ್ಗೆ ಸಂಘಸಂಸ್ಥೆಗಳು ದುಡಿಯುವುದರಿಂದ ಯಾವುದೇ ರೀತಿಯ ಸೌಲತ್ತುಗಳು ಅವಳು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಕಾರಣ ಅವಳನ್ನು ಪುರುಷ ಪ್ರಧಾನ ಸಮಾಜವು ಕೀಳಾಗಿ ಕಾಣುವುದರಿಂದ ಎರಡನೆ ದರ್ಜೆಯ ಪ್ರಜೆಯಾಗಿಸುವುದರಿಂದ ಮಹಿಳೆಯ ಮೇಲೆ ನಿರಂತರ ಶೋಷಣೆಗಳು ನಡೆದಿವೆ. ಅದರಲ್ಲೂ ವಿಧವೆಯ ಮಹಿಳೆಯ ಮೇಲೆ ಮತ್ತಿಷ್ಟು ಶೋಷಣೆಗಳು ನಡೆಯುತ್ತಿವೆ. ಆದಕಾರಣ ಗುಲಬರ್ಗಾ ಜಿಲ್ಲೆಯ ವಿಧವೆಯರನ್ನು ಸಂದರ್ಶನಕ್ಕೆ ಕೈಗೊಂಡಿದ್ದೇನೆ. ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡಿರುವ ಸ್ಥಳಗಳು ಗುಲಬರ್ಗಾ ಜಿಲ್ಲೆಯ ಒಂದು ಹಳ್ಳಿ ಮತ್ತು ನಗರ ಪ್ರದೇಶ.

## ಕ್ಷೇತ್ರಕಾರ್ಯಕ್ಕೆ ಆಯ್ಕೆಮಾಡಿಕೊಂಡಿರುವ ನಗರ ಮತ್ತು ಗ್ರಾಮಗಳ ಪರಿಚಯ

ಗುಲಬರ್ಗಾ ಜಿಲ್ಲೆಯ ಅಫಜಲಪೂರ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ತೆಲ್ಲೋಣೆ ಗ್ರಾಮದ ವಿಧವೆಯರೊಂದಿಗಿನ ಸಂದರ್ಶನ ಮತ್ತು ಪ್ರಶ್ನಾವಳಿಯ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ. ಈ ಒಂದು ಕ್ಷೇತ್ರಕಾರ್ಯದ ಸಂದರ್ಶನದಲ್ಲಿ ವಿಧವೆಯರನ್ನು ಮೂರು ವರ್ಗಗಳಾಗಿ ವಿಂಗಡಿಸಲಾಗಿದೆ.

ಮೊದಲನೆಯ ವರ್ಗ ಮದುವೆಯಾದ ಒಂದೆರಡು ವರ್ಷದೊಳಗೆ ವಿಧವೆಯರಾಗಿ, ಸಂತಾನವನ್ನು ಹೊಂದಿರದಂಥವರನ್ನು, ಎರಡನೆಯ ವರ್ಗದವರು ಮದುವೆಯಾಗಿ ೫-೧೦ ವರ್ಷ ದಾಂಪತ್ಯ ಜೀವನವನ್ನು ನಡೆಸಿ ಒಂದು ಎರಡು ಮಕ್ಕಳನ್ನು ಪಡೆದು ವಿಧವೆಯರಾದವರನ್ನು ಸಂದರ್ಶಿಸಲಾಗಿದೆ. ಇನ್ನು ಮೂರನೆಯ ವರ್ಗದವರು ವಯಸ್ಸಾದ ವಿಧವೆಯರನ್ನು ಅಂದರೆ ೪೦ ವರ್ಷಕ್ಕೆ ಮೇಲ್ಪಟ್ಟ ವಿಧವೆಯರನ್ನು ಸಂದರ್ಶಿಸಲಾಗಿದೆ. ಒಟ್ಟು ಈ ಕ್ಷೇತ್ರಕಾರ್ಯದಲ್ಲಿ ೨೦ ರಿಂದ ೬೦ ವರ್ಷದ ಮೇಲ್ಪಟ್ಟ ವಿಧವೆಯರನ್ನು ಸಂದರ್ಶಿಸಲಾಗಿದೆ. ಈ ಹಳ್ಳಿಯ ಕುಟುಂಬಗಳು ೪೦೦ ಇದ್ದು ೧೫೦೦ ಜನಸಂಖ್ಯೆಯನ್ನು ಹೊಂದಿದೆ. ಈ ಹಳ್ಳಿಯ ಜನರು ಹೆಚ್ಚಾಗಿ ವ್ಯವಸಾಯವನ್ನೆ ತಮ್ಮ ಕಸುಬಾಗಿಸಿಕೊಂಡಿದ್ದಾರೆ. ಈ ಹಳ್ಳಿಯಲ್ಲಿ ಕೆಲವು ಭೂಮಿಗಳು ಮಳೆಯಾಶ್ರೀತವಾಗಿವೆ ಇನ್ನು ಕೆಲವು ಭೂಮಿಯು ಭಾವಿಯ ನೀರಿನಿಂದ ವ್ಯವಸಾಯ ಮಾಡುವರು. ಇಲ್ಲಿ ಬೆಳೆಯುವ ಬೆಳೆಗಳು ಜೋಳ, ಸಜ್ಜೆ, ತೊಗರೆ, ಶೇಂಗಾ, ಕಡಲೆ, ಸೂರ್ಯಕಾಂತಿ, ಕಬ್ಬು ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಈ ಹಳ್ಳಿಯ ಕುಟುಂಬಗಳಲ್ಲಿ ೩೦ ಕುಟುಂಬಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಮಾಹಿತಿ ಪಡೆಯಲಾಗಿದೆ.

ಆರ್ಥಿಕವಾಗಿ ಈ ಹಳ್ಳಿಯ ಸ್ಥಿತಿಗತಿ ಅಷ್ಟೊಂದು ಚೆನ್ನಾಗಿಲ್ಲ. ಜನರು ವ್ಯವಸಾಯ ಮತ್ತು ಕೂಲಿಯಿಂದ ಉಪಜೀವನ ನಡೆಸುತ್ತಿರುವುದೇ ಹೆಚ್ಚಾಗಿ ಕಂಡುಬಂದಿದೆ. ಆರ್ಥಿಕವಾಗಿ ಹಿಂದುಳಿದ ಕುಟುಂಬಗಳೇ ಹೆಚ್ಚಾಗಿವೆ. ಬಡತನದ ಸಮಸ್ಯೆಯಿಂದ ಪೂನಾ, ಮುಂಬಯಿಗಳಿಗೆ ದುಡಿಯಲಿಕ್ಕೆ ವಲಸೆ ಹೋಗುತ್ತಿದ್ದಾರೆ. ಈ ಗ್ರಾಮದಲ್ಲಿ ಮಲ್ಲಿಕಾರ್ಜುನ ದೇವಾಲಯ, ಹನುಮಾನ ದೇವಾಲಯ, ಲಕ್ಷ್ಮೀ, ಮಾರೆಮ್ಮ ದೇವಾಲಯಗಳಿವೆ. ಮಾರೆಮ್ಮ ದೇವರಿಗೆ ಬಲಿಕೊಡುವ ಸಂಪ್ರದಾಯವಿದೆ ಕಾರಣ ಇಲ್ಲಿಯ ಜನರು ಹೆಚ್ಚಾಗಿ ಅನಕ್ಷರಸ್ಥರಾಗಿರುವುದರಿಂದ ಮೂಡನಂಬಿಕೆಗಳಿಗೆ ಬಲಿಯಾಗಿದ್ದಾರೆ. ಈ ಹಳ್ಳಿಯಲ್ಲಿ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯಿದೆ. ಕೇವಲ ಮೂರು ಜನ ಶಿಕ್ಷಕರು ಮಾತ್ರ ಈ ಶಾಲೆಯಲ್ಲಿ ಭೋದನೆಯನ್ನು ಮಾಡುತ್ತಲಿದ್ದಾರೆ. ಈ ಹಳ್ಳಿಯು ಆರ್ಥಿಕವಾಗಿ ಹಿಂದುಳಿದಿರುವುದರಿಂದ ಮಕ್ಕಳು ಶಾಲೆಗೆ ಹೋಗುತ್ತಿರುವುದು ಅತಿ ಕಡಿಮೆಯಾಗಿ ಕಂಡುಬಂದಿದೆ. ಈ ಗ್ರಾಮದಲ್ಲಿ ಉನ್ನತ ಶಿಕ್ಷಣ ಪಡೆದವರ ಸಂಖ್ಯೆಯು ಅತಿಕಡಿಮೆ ಇದೆ. ಅಂದರೆ ಬೆರಳೆಣಿಕೆಯಷ್ಟು ಜನ ಮಾತ್ರ ಶಿಕ್ಷಣವನ್ನು ಪಡೆದಿದ್ದಾರೆ. ಈ ಹಳ್ಳಿಯಲ್ಲಿ ಒಂದು ಅಂಗನವಾಡಿಕೇಂದ್ರವಿದೆ. ಇಲ್ಲಿ ಎರಡು ಮಹಿಳಾ ಸಂಘಗಳಿವೆ. ಈ ಸಂಘಗಳು ಮಹಿಳೆಯರ ಸಮಸ್ಯೆಗಳನ್ನು ಅರಿತುಕೊಂಡು ಆ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಸಹಾಯ ನೀಡುತ್ತಿವೆ. ಈ ಹಳ್ಳಿಗೆ ಬಸ್ಸಿನ ವ್ಯವಸ್ಥೆಯೂ ಇಲ್ಲ. ಮತ್ತು ಆರೋಗ್ಯ ಕೇಂದ್ರವೂ ಇಲ್ಲ. ಹಿರಿಯ ಪ್ರಾಥಮಿಕ ಶಿಕ್ಷಣವನ್ನು ಪಡೆಯಬೇಕಾದರೆ ಬೇರೆ ಅಂದರೆ ಪಕ್ಕದ ಹಳ್ಳಿಗೆ ಹೋಗಬೇಕಾಗುವುದು. ಈ ಎರಡು ಹಳ್ಳಿಗಳ ಮಧ್ಯೆ ಬೋರಿ(ನದಿ)ಯು ಮಧ್ಯದಲ್ಲಿರುವುದರಿಂದ

ಮಳೆಗಾಲದಲ್ಲಿ ಮಕ್ಕಳು ಶಾಲೆಗೆ ಹೋಗಲು ಅನಾನುಕೂಲವಾಗುವುದು. ಆದ ಕಾರಣ ಮಕ್ಕಳು ಹೆಚ್ಚಾಗಿ ಮಧ್ಯದಲ್ಲಿಯೇ ಶಾಲೆಯನ್ನು ಬಿಟ್ಟು ಹೊಲದ ಕೆಲಸಗಳಲ್ಲಿ ತೊಡಗುವುದು, ಕೂಲಿ ಮಾಡುವುದು, ದನಕಾಯುವದನ್ನು ಮಾಡುತ್ತಿದ್ದಾರೆ. ಬಹುತೇಕ ಕುಟುಂಬಗಳು ಸಂಪ್ರದಾಯಸ್ಥ ಕುಟುಂಬಗಳಾಗಿರುವುದರಿಂದ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಅಲ್ಲದೆ ಉನ್ನತ ಜಾತಿಗಳಲ್ಲಿ ಕೆಲವೊಂದು ವಿಧವೆಯರು ನೋವನ್ನು ಅನುಭವಿಸುತ್ತಿದ್ದಾರೆ. ಕೆಳಜಾತಿಗಳಲ್ಲಿ ಉಡಿಕೆ ಪದ್ಧತಿ ಇರುವುದರಿಂದ ವಿಧವೆಯರು ಅಷ್ಟೊಂದು ನೋವನ್ನು ಅನುಭವಿಸುತ್ತಿಲ್ಲವೆಂದು ತಿಳಿದುಬಂದಿದೆ. ಇಲ್ಲಿನ ವಿಧವೆಯರು ಶಿಕ್ಷಣ ಪಡೆಯದೆ ಇರುವುದರಿಂದ ಮನೆಯ ಕೆಲಸಗಳನ್ನು ಮಾಡಿ ಹೊಲಕ್ಕೆ ಹೋಗಿ ಹೊಲದಲ್ಲಿಯೇ ಕೆಲಸಗಳನ್ನು ಮಾಡಿ ಜೀವನ ನಡೆಸುತ್ತಲಿದ್ದಾರೆ.

## ನಗರ ಪ್ರದೇಶದ ಪರಿಚಯ

ಗುಲಬರ್ಗಾ ಜಿಲ್ಲೆಯ ನಗರ ಪ್ರದೇಶವಾದ ಬಿದ್ದಾಪೂರ ಕಾಲೋನಿಯನ್ನು ಕ್ಷೇತ್ರಕಾರ್ಯಕ್ಕೆ ಆಯ್ಕೆಯನ್ನು ಮಾಡಿಕೊಂಡಿದ್ದೇನೆ. ಈ ಕಾಲೋನಿಯು ಸುಮಾರು ೨೦೦ ಮನೆಗಳಿಂದ ಕೂಡಿದೆ. ಇಲ್ಲಿಯ ಜನರು ಉನ್ನತವಾದ ಶಿಕ್ಷಣವನ್ನು ಪಡೆದು ಉದ್ಯೋಗಸ್ಥರಾಗಿದ್ದಾರೆ. ಇನ್ನು ಕೆಲವರು ವ್ಯಾಪಾರಸ್ಥರಾಗಿದ್ದಾರೆ. ಈ ಕಾಲೋನಿಯಲ್ಲಿ ಎರಡು ಚಿಕಿತ್ಸಾ ಕೇಂದ್ರಗಳಿವೆ. ಮತ್ತು ಇಂಗ್ಲೀಷ್ ಹಾಗೂ ಕನ್ನಡ ಮಾಧ್ಯಮದ ಶಾಲೆಯು ಇದೆ. ಇಲ್ಲಿಯ ಹನುಮಾನ ಮಂದಿರ ಬಹಳ ಮುಖ್ಯವಾದ ದೇವಸ್ಥಾನವಿದೆ. ಈ ದೇವಸ್ಥಾನಕ್ಕೆ ದೂರ ದೂರದಿಂದ ಭಕ್ತಾದಿಗಳು ಬಂದು ದರ್ಶನವನ್ನು ಪಡೆಯುತ್ತಾರೆ. ಇಲ್ಲಿ ಎರಡು ಮಹಿಳಾ ಸಂಘಗಳು ಇವೆ. ಈ ಕಾಲೋನಿಯು ಕೇಂದ್ರ ಬಸ್ ನಿಲ್ದಾಣಕ್ಕೆ ಬಹಳ ಹತ್ತಿರವಾಗುತ್ತದೆ. ಅಲ್ಲದೆ ಈ ಕಾಲೋನಿಗೆ ಬಸ್ಸಿನ ಅನುಕೂಲಗಳು ಬಹಳ ಇವೆ. ಈ ಕಾಲೋನಿಯು ಎಲ್ಲಾ ಜಾತಿ ವರ್ಗದವರ ಮನೆಗಳನ್ನು ಹೊಂದಿದೆ. ಇಲ್ಲಿ ನೀರಿನ ವ್ಯವಸ್ಥೆ ಅನುಕೂಲವಾಗಿದೆ. ಕಾರಣ ಪ್ರತಿಯೊಂದು ಮನೆಗೂ ಬೋರವೆಲ್‌ಗಳು(ಕೊಳವೆ ಬಾವಿಗಳು) ಇರುವುದರಿಂದ ನೀರಿಗೆ ಯಾವುದೇ ರೀತಿಯಾದ ತೊಂದರೆಯಾಗಿಲ್ಲ. ಈ ಕಾಲೋನಿಯಲ್ಲಿ ೩೦ ಜನ ವಿಧವೆಯರನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಇಲ್ಲಿಯ ವಿಧವೆಯರು ಶಿಕ್ಷಣವನ್ನು ಪಡೆದಿದ್ದಾರೆ ಮತ್ತು ಆ ಶಿಕ್ಷಣದ ಉಪಯೋಗವನ್ನು ಪಡೆಯುತ್ತಿದ್ದಾರೆ. ಶಿಕ್ಷಣ ಪಡೆಯದ ವಿಧವೆಯರು ಹೈನುಗಾರಿಕೆಯ ವ್ಯಾಪಾರವನ್ನು ಮಾಡುತ್ತಿದ್ದಾರೆ. ಇನ್ನು ಕೆಲವರು ಹೊಲಿಗೆ ಪಾಠವನ್ನು ಹೇಳಿಕೊಡುತ್ತಿದ್ದಾರೆ. ಇನ್ನು ಕೆಲವರು ವ್ಯಾಪಾರವನ್ನು ಮಾಡುತ್ತಲಿದ್ದಾರೆ. ಶಿಕ್ಷಣವನ್ನು ಪಡೆದ ವಿಧವೆಯರು ತಮ್ಮ ಪತಿಯ ಮರಣದ ನಂತರ ಉದ್ಯೋಗಗಳಿಗೆ ಸೇರಿಕೊಂಡಿದ್ದಾರೆ. ಇಲ್ಲಿ ಮರುವಿವಾಹವಾದ ವಿಧವೆಯರನ್ನು ಸಹ ಕಾಣಬಹುದಾಗಿದೆ. ಈ ಕಾಲೋನಿಯಲ್ಲಿಯೂ ಸಹ ವಿಧವೆಯರನ್ನು ಮೂರು ವರ್ಗಗಳನ್ನು ಮಾಡಿ ಅವರನ್ನು ಸಂದರ್ಶಿಸಿ ಅವರಿಂದ ಮಾಹಿತಿಯನ್ನು ಪಡೆಯಲಾಗಿದೆ.

## ಕೋಷ್ಟಕ ೧

### ಗ್ರಾಮೀಣ ಮತ್ತು ನಗರ ಕುಟುಂಬಗಳಲ್ಲಿ ವಿಧವೆಯರ ಸಾಮಾಜಿಕ ವಿವರ

| ಜಾತಿವಾರು | ವಯಸ್ಸು | | | ಒಟ್ಟು ಪ್ರತಿಶತ | ವಿದ್ಯಾಭ್ಯಾಸ | | ಒಟ್ಟು ಪ್ರತಿಶತ | ಉದ್ಯೋಗ | | | ಒಟ್ಟು ಪ್ರತಿಶತ |
|---|---|---|---|---|---|---|---|---|---|---|---|
| | ೨೦-೩೦ | ೩೦-೪೦ | ೪೦-೬೦ | | ಅನಕ್ಷರಸ್ಥರು | ಅಕ್ಷರಸ್ಥರು | | ಗೃಹಿಣಿ | ಕೂಲಿ | ಉದ್ಯೋಗಸ್ಥರು | |
| ಪ.ಜಾ. | ೦೪ | ೦೬ | ೦೫ | ೧೫ (೨೫%) | ೦೬ | ೦೯ | ೧೫ (೨೫%) | ೭ | ೦೫ | ೦೩ | ೧೫ (೨೫%) |
| ಪ.ಪಂಗಡ | ೦೩ | ೦೭ | ೦೫ | ೧೫ (೨೫%) | ೧೦ | ೦೫ | ೧೫ (೨೫%) | ೦೬ | ೦೭ | ೦೨ | ೧೫ (೨೫%) |
| ಹಿಂದುಳಿದವರ್ಗ | ೦೫ | ೦೪ | ೦೬ | ೧೫ (೨೫%) | ೦೮ | ೦೭ | ೧೫ (೨೫%) | ೦೪ | ೦೮ | ೦೩ | ೧೫ (೨೫%) |
| ಸಾಮಾನ್ಯ | ೦೩ | ೦೫ | ೦೭ | ೧೫ (೨೫%) | ೦೩ | ೧೨ | ೧೫ (೨೫%) | ೦೮ | - - | ೦೭ | ೧೫ (೨೫%) |
| ಒಟ್ಟು ಪ್ರತಿಶತ | ೧೫ (೨೫%) | ೨೨ (೩೬.೬೭%) | ೨೩ (೩೮.೩೩%) | ೬೦ (೧೦೦%) | ೨೭ (೪೫%) | ೩೩ (೫೫%) | ೬೦ (೧೦೦%) | ೨೫ (೪೧.೬೭%) | ೨೦ (೩೩.೩೩%) | ೧೫ (೨೫%) | ೬೦ (೧೦೦%) |

ಕೌಟುಂಬಿಕ ವಿವರದಲ್ಲಿ ಮಹಿಳೆಯರ ಸಾಮಾಜಿಕ ಅಂತಸ್ತನ್ನು ಗಮನಿಸಿದಾಗ ಹಲವಾರು ರೀತಿಯಲ್ಲಿ ಬದುಕುವ ಕುಟುಂಬಗಳನ್ನು ಸಂಶೋಧನೆಯ ಮೂಲಕ ಗುರುತಿಸಲಾಗಿದೆ.

ಈ ಮೇಲಿನ ಕೊಷ್ಟಕದಿಂದ ತಿಳಿದುಬರುವ ಅಂಶಗಳೆಂದರೆ ಅಧ್ಯಯನಕ್ಕಾಗಿ ಆಯ್ಕೆಮಾಡಿಕೊಂಡ ಮಾದರಿಗಳಲ್ಲಿ ಪ.ಜಾ ೪ ಜನ ವಿಧವೆಯರು ೨೦-೩೦ ವರ್ಷ ವಯಸ್ಸನ್ನು ಹೊಂದಿರುತ್ತಾರೆ. ೬ ಜನ ಮಹಿಳೆಯರು ೩೦-೪೦ ವರ್ಷ ವಯಸ್ಸಿನವರಿಗೆ ಹಾಗೂ ೪೦-೬೦ ವರ್ಷ ವಯಸ್ಸಿನವರು ೫ ಜನರನ್ನು ಸಂದರ್ಶಿಸಲಾಗಿದೆ. ಒಟ್ಟು ಪ.ಜಾತಿಯಲ್ಲಿ ೧೫ ಜನ ವಿಧವೆಯರನ್ನು ಸಂದರ್ಶಿಸಲಾಗಿದೆ. ಹಾಗೆಯೇ ಪ.ಪಂಗಡದವರಲ್ಲಿ ೨೦-೩೦ ವರ್ಷವಯಸ್ಸಿನ ೩ ಜನ ವಿಧವೆಯರು, ೩೦-೪೦ ವರ್ಷದವರನ್ನು ೭ ಜನ ವಿಧವೆಯರನ್ನು ಹಾಗೂ ೪೦-೬೦ ವರ್ಷ ವಯಸ್ಸಿನ ೫ ಜನ ವಿಧವೆಯರನ್ನು ಸಂದರ್ಶಿಸಲಾಗಿದೆ. ಇವರಲ್ಲಿಯೂ ಸಹ ಒಟ್ಟು ೧೫ ಜನ ವಿಧವೆಯರನ್ನು ಸಂದರ್ಶಿಸಲಾಗಿದೆ. ಹಿಂದುಳಿದ ವರ್ಗದವರಲ್ಲಿ ೫ ಜನ ವಿಧವೆಯರು ೨೦-೩೦ ವರ್ಷ ವಯಸ್ಸಿನವರು, ೩೦-೪೦ ವರ್ಷದವರನ್ನು ೭ ಜನ ಹಾಗೂ ೫ ಜನ ೪೦-೬೦ವರ್ಷ ವಯಸ್ಸನ್ನು ಹೊಂದಿದವರನ್ನು ಸಂದರ್ಶನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೆಯೇ ಸಾಮಾನ್ಯ ವರ್ಗದವರಲ್ಲಿ ೩ ಜನ ವಿಧವೆಯರು ೨೦-೩೦ ವರ್ಷದವರು, ೩೦-೪೦ ವರ್ಷದವರನ್ನು ೫ ಜನ ಹಾಗೂ ೭ ಜನ ವಿಧವೆಯರನ್ನು ೪೦-೬೦ ವರ್ಷ ತುಂಬಿದವರನ್ನು ಇವರಲ್ಲಿಯೂ ಸಹ ಒಟ್ಟು ೧೫ ಜನ ವಿಧವೆಯರನ್ನು ಸಂದರ್ಶಿಸಲಾಗಿದೆ.

ಈ ಒಟ್ಟು ೧೫ ಜನ ವಿಧವೆಯರ ಸಂದರ್ಶನದಲ್ಲಿ ಪ.ಜಾತಿಯಲ್ಲಿ ೬ ಜನ ಅನಕ್ಷರಸ್ಥರಾಗಿದ್ದಾರೆ, ಮತ್ತು ೯ ಜನ ಅಕ್ಷರಸ್ಥರಾಗಿದ್ದಾರೆ. ಪ.ಪಂಗಡದ ವಿಧವೆಯರಲ್ಲಿ ೧೦ ಜನ ವಿಧವೆಯರು ಅನಕ್ಷರಸ್ಥರಾಗಿದ್ದಾರೆ. ಹಾಗೆಯೇ ೫ ಜನ ವಿಧವೆಯರು ಅಕ್ಷರಸ್ಥರಾಗಿದ್ದಾರೆ. ಹಿಂದೂಳಿದ ವರ್ಗದವರಲ್ಲಿ ೮ ಜನ ವಿಧವೆಯರು ಅನಕ್ಷರಸ್ಥರಾಗಿದ್ದಾರೆ. ೭ ಜನ ವಿಧವೆಯರು ಅಕ್ಷರಸ್ಥರಾಗಿದ್ದಾರೆ. ಸಾಮಾನ್ಯರಲ್ಲಿ ೩ ಜನ ವಿಧವೆಯರು ಅನಕ್ಷರಸ್ಥರಾಗಿದ್ದಾರೆ. ಹಾಗೂ ೧೨ ಜನ ವಿಧವೆಯರು ಅಕ್ಷರಸ್ಥರಾಗಿದ್ದಾರೆ ಎಂದು ಈ ಕೋಷ್ಟಕದಿಂದ ತಿಳಿದುಬಂದಿದೆ.

ಅದೇ ರೀತಿಯಾಗಿ ವಿಧವೆಯರ ಉದ್ಯೋಗವನ್ನು ಗಮನಿಸಿದಾಗ ಪ.ಜಾತಿಯಲ್ಲಿ ೭ಜನ ವಿಧವೆಯರು ಗ್ರಹಿಣಿಯರಾಗಿದ್ದಾರೆ. ೫ ಜನ ವಿಧವೆಯರನ್ನು ಕೂಲಿ ಮಾಡುತ್ತಲಿದ್ದಾರೆ. ೩ ಜನ ವಿಧವೆಯರು ಮಾತ್ರ ಉದ್ಯೋಗಸ್ಥರಾಗಿದ್ದಾರೆ. ಹಾಗೆಯೇ ಪರಿಶಿಷ್ಟ ಪಂಗಡದವರಲ್ಲಿ ೬ ಜನ ವಿಧವೆಯರು ಮನೆಕೆಲಸಗಳಲ್ಲಿ ತೊಡಗಿದ್ದಾರೆ. ೭ಜನ ವಿಧವೆಯರು ಕೂಲಿ ಮಾಡುತ್ತಲಿದ್ದಾರೆ. ಹಾಗೆಯೇ ೨ ಜನ ವಿಧವೆಯರು ಉದ್ಯೋಗಸ್ಥರಾಗಿದ್ದಾರೆ. ಹಿಂದುಳಿದ ವರ್ಗದವರಲ್ಲಿ ೪ ಜನ ವಿಧವೆಯರು ಗ್ರಹಿಣಿಯಾರಾಗಿ ಕೆಲಸ

ಮಾಡುತ್ತಲಿದ್ದಾರೆ. ೮ ಜನ ವಿಧವೆಯರು ಕೂಲಿ ಕೆಲಸ ಮಾಡುತ್ತಲಿದ್ದಾರೆ. ಮತ್ತು ೩ ಜನ ವಿಧವೆಯರು ಮಾತ್ರ ಉದ್ಯೋಗಸ್ಥರಾಗಿದ್ದಾರೆ. ಸಾಮಾನ್ಯರಲ್ಲಿ ೮ ಜನ ವಿಧವೆಯರು ಗೃಹಿಣಿಯರಾಗಿದ್ದಾರೆ. ಕೂಲಿ ಕೆಲಸದಲ್ಲಿ ಯಾರು ಕಂಡುಬಂದಿರುವುದಿಲ್ಲ ಹಾಗೆಯೇ ೭ ಜನ ವಿಧವೆಯರು ಉದ್ಯೋಗಸ್ಥರಾಗಿದ್ದಾರೆ.

ಈ ಮೇಲಿನ ಎಲ್ಲಾ ಅಂಕಿ ಅಂಶಗಳನ್ನು ಗಮನಿಸಿದಾಗ ತಿಳಿದು ಬರುವುದೇನೆಂದರೆ ಪ.ಜಾತಿ ವಿಧವೆಯರಲ್ಲಿ ಅಕ್ಷರಸ್ಥರು ಹೆಚ್ಚಾಗಿ ಕಂಡುಬಂದರು ಸಹ ಗೃಹಿಣಿಯಾಗಿಯೇ ಇದ್ದಾರೆ. ಅಲ್ಲದೇ ಅವರ ಆರ್ಥಿಕ ಸ್ಥಿತಿಯು ಅಷ್ಟೊಂದು ಉತ್ತಮವಾಗಿರದ ಕಾರಣ ೫೫ ಜನ ಕೂಲಿಯನ್ನು ಮಾಡುತ್ತಲಿದ್ದಾರೆ. ಕೇವಲ ಸ್ವಲ್ಪ ಜನ ವಿಧವೆಯರು ಮಾತ್ರ ಉದ್ಯೋಗಸ್ಥರಾಗಿದ್ದಾರೆ. ಅಲ್ಲದೆ ಪ.ಪಂಗಡದವರಲ್ಲಿಯೂ ಸಹ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿ ಕಂಡುಬಂದಿರುವುದರಿಂದ ಹೆಚ್ಚಾಗಿ ಕೂಲಿ ಕೆಲಸ ಮತ್ತು ಮನೆಯಲ್ಲಿಯೇ ಇರುವವರು ಕಂಡುಬಂದಿದ್ದಾರೆ. ಕೇವಲ ಇಬ್ಬರು ವಿಧವೆಯರು ಮಾತ್ರ ಉದ್ಯೋಗಸ್ಥರಾಗಿದ್ದಾರೆ.ಹಾಗೆಯೇ ಹಿಂದುಳಿದ ವರ್ಗದವರಲ್ಲಿಯೂ ಸಹ ಅಕ್ಷರಸ್ಥರು ಕಂಡುಬಂದಿದ್ದರು ಸಹ ಕೂಲಿಯನ್ನೆ ಹೆಚ್ಚು ಜನ ಅವಲಂಬಿಸಿದ್ದಾರೆ. ಸಾಮಾನ್ಯರಲ್ಲಿ ಅಕ್ಷರಸ್ಥರಿದ್ದರು ಸಹ ಮನೆಯಲ್ಲಿಯೆ ಇದ್ದಾರೆ. ಅಲ್ಲದೆ ಕೂಲಿಯಲ್ಲಿ ಯಾರು ಕಂಡುಬಂದಿಲ್ಲ. ಕೆಲವು ಮಹಿಳೆಯರು ಮಾತ್ರ ಉದ್ಯೋಗಸ್ಥರಾಗಿದ್ದಾರೆ. ಈ ಎಲ್ಲಾ ಜಾತಿಯ ವಿಧವೆಯರನ್ನು ಗಮನಿಸಿದರೆ ಕೆಲವು ಜನ ವಿಧವೆಯರು ಮದುವೆಗೆ ಮುಂಚೆ ಶಿಕ್ಷಣವನ್ನು ಪಡೆದಿದ್ದಾರೆ. ಇನ್ನು ಕೆಲವು ವಿಧವೆಯರು ವಿಧವೆಯರಾದ ಮೇಲೆ ತನ್ನ ಆರ್ಥಿಕ ಸ್ಥಿತಿ ಸ್ವಲ್ಪಮಟ್ಟಿಗಾದರೂ ಸುಧಾರಿಸಲು ಶಿಕ್ಷಣವನ್ನು ಪಡೆದಿದ್ದಾರೆ. ಅಲ್ಲದೆ ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಅನೇಕ ಮಹಿಳೆಯರು ಮನೆಯಲ್ಲಿಯೇ ಹೈನುಗಾರಿಕೆ ಮುಂತಾದ ವ್ಯಾಪಾರಗಳನ್ನು ಮಾಡುತ್ತಲಿದ್ದಾರೆ. ಇಲ್ಲಿಯ ಜನರು ಸಂಪ್ರದಾಯ ಕುಟುಂಬಗಳಿಗೆ ಒಳಪಟ್ಟಿರುವುದರಿಂದ ಹೆಚ್ಚಾಗಿ ಶಿಕ್ಷಣವನ್ನು ಪಡೆದರು ಉದ್ಯೋಗವನ್ನು ಮಾಡುತ್ತ ಇಲ್ಲ. ಅವರು ಹೆಚ್ಚಿನ ಶಿಕ್ಷಣ ಪಡೆಯದಕಾರಣ ಕೂಲಿಯನ್ನೇ ಅವಲಂಬಿಸಿದ್ದಾರೆ. ಅದರಲ್ಲೂ ಗ್ರಾಮೀಣ ಪ್ರದೇಶದ ವಿಧವೆಯರು ಹೆಚ್ಚಾಗಿ ಅನಕ್ಷರಸ್ಥರಾಗಿರುವುದರಿಂದ ಅವರು ಹೈನುಗಾರಿಕೆ ಕೆಲಸ ಮಾಡುತ್ತಿದ್ದಾರೆ. ಬಂಡವಾಳ ಇಲ್ಲದ ವಿಧವೆಯರು ಕೂಲಿಯನ್ನು ಮಾಡಿ ಬದುಕುತ್ತಿದ್ದಾರೆ.

### ಕೋಷ್ಟಕ ೨

### ಗ್ರಾಮೀಣ ಮತ್ತು ನಗರ ಪ್ರದೇಶದ ವಿಧವೆಯರು ಪುನರ್ವಿವಾಹವಾಗುವುದರ ಬಗ್ಗೆ ಅಭಿಪ್ರಾಯಗಳು

| ಜಾತಿವಾರು | ಗ್ರಾಮೀಣ | | ನಗರ | | ಒಟ್ಟು |
|---|---|---|---|---|---|
| | ಇಷ್ಟವಿದೆ | ಇಷ್ಟವಿಲ್ಲ | ಇಷ್ಟವಿದೆ | ಇಷ್ಟವಿಲ್ಲ | ಪ್ರತಿಶತ |
| ಪ.ಜಾತಿ | ೫ | ೩ | ೪ | ೩ | ೧೫ (೨೫%) |
| ಪ.ಪಂಗಡ | ೩ | ೪ | ೬ | ೨ | ೧೫ (೨೫%) |
| ಹಿಂದುಳಿದವರ್ಗ | ೩ | ೫ | ೪ | ೩ | ೧೫ (೨೫%) |
| ಸಾಮಾನ್ಯ | - | ೭ | - | ೮ | ೧೫ (೨೫%) |
| ಒಟ್ಟು | ೧೧ | ೧೯ | ೧೪ | ೧೬ | ೬೦ |
| ಪ್ರತಿಶತ | (೧೮.೩೩) | (೩೧.೬೭) | (೨೩.೩೪) | (೨೬.೬೬) | (೧೦೦%) |

ಗ್ರಾಮೀಣ ಪ್ರದೇಶದಲ್ಲಿ ವಿಧವೆಯರು ಪ.ಜಾತಿಯವರಲ್ಲಿ ಮರುವಿವಾಹವಾಗಲು ೫ ಜನ ಇಷ್ಟವಿದೆ ಎಂದಿದ್ದಾರೆ. ಇಷ್ಟವಿಲ್ಲ ಎಂದವರು ೩ ಜನ ವಿಧವೆಯರು ಮಾತ್ರ. ಒಟ್ಟು ೧೫ ಜನ ವಿಧವೆಯರ ಸಂದರ್ಶನದಲ್ಲಿ ನಗರ ಪ್ರದೇಶದಲ್ಲಿ ವಿಧವೆಯರು ಮರುವಿವಾಹವಾಗಲು ಇಷ್ಟವಿದೆ ಎಂದವರು ೪ ಜನ ಮಾತ್ರ, ೩ ಜನ ವಿಧವೆಯರು ಮರುಮದುವೆಯ ಪರವಾಗಿ ಇಲ್ಲ. ಪ.ಪಂಗಡದವರಲ್ಲಿ ಗ್ರಾಮಿಣ ಪ್ರದೇಶದ ಮಹಿಳೆಯರಲ್ಲಿ ವಿಧವೆಯರು ಮರುವಿವಾಹವಾಗಲು ಇಷ್ಟವಿದೆ ಎಂದವರು ೩ ಜನ, ಇಷ್ಟವಿಲ್ಲದವರು ೪ ಜನ. ನಗರ ಪ್ರದೇಶದಲ್ಲಿ ಮರುವಿವಾಹವಾಗಲು ಒಪ್ಪಿದವರು ೬ ಜನ ವಿಧವೆಯರು ಇಬ್ಬರು ವಿಧವೆಯರು ಮಾತ್ರ ಮರುಮದುವೆಗೆ ಒಪ್ಪಿಗೆ ನೀಡಿಲ್ಲ. ಹಿಂದುಳಿದ ವರ್ಗದವರಲ್ಲಿ ಗ್ರಾಮೀಣ ಪ್ರದೇಶದವರು ಮರುವಿವಾಹವಾಗಲು ೩ ಜನ ಒಪ್ಪಿಗೆ ಸೂಚಿಸಿದರೆ, ವಿಧವೆಯರಾಗಿಯೇ ಉಳಿಯಲು ೫ ಜನ ಒಪ್ಪಿಗೆ ನೀಡಿದ್ದಾರೆ. ನಗರ ಪ್ರದೇಶದಲ್ಲಿ ೪ ಜನ ವಿಧವೆಯರು ಮರುವಿವಾಹ ಇಷ್ಟಿವಿದೆ ಎಂದಿದ್ದಾರೆ, ೩ ಜನ ವಿಧವೆಯರು ಇಷ್ಟವಿಲ ಎಂದಿದ್ದಾರೆ. ಸಾಮಾನ್ಯರಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿಯೇ ಆಗಲಿ ವಿಧವೆಯರು ನಮಗೆ ಮರುಮದುವೆಯಾಗಲು ಇಷ್ಟವಿಲ್ಲ ಎಂದಿದ್ದಾರೆ. ಇಷ್ಟವಿದೆಯೆಂದವರು ಗ್ರಾಮೀಣ ಪ್ರದೇಶದಲ್ಲಾಗಲಿ ಮತ್ತು ನಗರ ಪ್ರದೇಶದಲ್ಲಾಗಲಿ ಕಂಡಬಂದಿಲ್ಲ.

ಎಲ್ಲಾ ಜಾತಿಗಳಲ್ಲಿ ಗ್ರಾಮೀಣ ಪ್ರದೇಶದ ವಿಧವೆಯರು ಮರುವಿವಾಹವಾಗಲು ಇಷ್ಟವಿದೆ ಎಂದವರು ೧೧(೧೮.೩೩%) ವಿಧವೆಯರು, ಮರುವಿವಾಹಕ್ಕೆ ಒಪ್ಪಿಗೆ ಸೂಚಿಸದವರು ೧೯(೩೧.೬೭%) ವಿಧವೆಯರು. ನಗರ ಪ್ರದೇಶದಲ್ಲಿ ಮರುವಿವಾಹವಾಗಲು ಇಷ್ಟವಿದೆಯೆಂದು ವಿಧವೆಯರು ೧೪ ಜನ(೨೩.೩೪%) ಇಷ್ಟವಿಲ್ಲ ಎಂದವರು ೧೬ ಜನವಿಧವೆಯರು(೨೬.೬೬%). ಕಾರಣ ವಿಧವೆಯರು ಸಂಪ್ರದಾಯಸ್ಥ ಕುಟುಂಬದಿಂದ ಬಂದಿರುವುದರಿಂದ ಅವರು ಮರುವಿವಾಹವಾಗಲು ಇಷ್ಟವಿಲ್ಲ, ಅಲ್ಲದೆ ಧರ್ಮದ ವಿರುದ್ಧ ನಡೆದು ಕೊಂಡಹಾಗೆ ಆಗುವುದು, ಮರುವಿವಾಹವಾಗುವುದರಿಂದ ಸಮಾಜ ಕೀಳಾಗಿ ಕಾಣುವುದು ಎನ್ನುವ ದೃಷ್ಟಿಯಿಂದಲು ಸಹ ಮರುಮದುವೆಗೆ ಒಪ್ಪಿಗೆ ಸೂಚಿಸಿಲ್ಲ. ಕೆಲವರು ಪತಿಯೇ ಪರದೈವ ಎಂದು ತಿಳಿದವರು ಮರುವಿವಾಹವಾಗಲು ಇಷ್ಟಪಟ್ಟಿಲ್ಲ. ಇನ್ನು ಕೆಲವರು ತಾವು ವಿವಾಹವಾದರೆ ತಮ್ಮ ಮೊದಲ ಪತಿಯ ಮಕ್ಕಳು ಅನಾಥರಾಗುವರು ಎನ್ನುವ ಕಾರಣದಿಂದ ಸಹ ಅವರು ಮರುವಿವಾಹವಾಗಲು ಒಪ್ಪಲಿಲ್ಲ.

ಕೆಲವು ಮಹಿಳೆಯರು ಅಂದರೆ ಶಿಕ್ಷಣ ಪಡೆದಂಥವರು, ಶ್ರೀಮಂತ ವಿಧವೆಯರು ಮತ್ತು ಆರ್ಥಿಕ ಸ್ಥಿತಿ ತುಂಬಾ ಚಿಂತಾಜನಕವಾಗಿರುವಂಥವರು ಮರುವಿವಾಹವಾಗಲು ಒಪ್ಪಿಗೆಯನ್ನು ಸೂಚಿಸಿದ್ದಾರೆ. ಕೆಲವರು ಮರುವಿವಾಹವಾಗುವುದರಿಂದ ನಮಗೆ ಭದ್ರತೆ ದೊರೆಯುವುದು ಎಂದಿದ್ದಾರೆ.

**ಕೋಷ್ಟಕ ೩**

**ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ವಿಧೆವಯರು ಮತ್ತು ಮರುವಿವಾಹವಾದ ವಿಧವೆಯರು**

| ಜಾತಿವಾರು | ಗ್ರಾಮೀಣ | | ನಗರ | | ಒಟ್ಟು ಪ್ರತಿಶತ |
|---|---|---|---|---|---|
| | ವಿಧವೆಯರು | ಮರು ವಿವಾಹ | ವಿಧವೆಯರು | ಮರು ವಿವಾಹ | |
| ಪ.ಜಾತಿ | ೪ | ೪ | ೫ | ೨ | ೧೫ (೨೫%) |
| ಪ.ಪಂಗಡ | ೬ | ೧ | ೩ | ೫ | ೧೫ (೨೫%) |
| ಹಿಂದುಳಿದವರ್ಗ | ೪ | ೪ | ೬ | ೧ | ೧೫ (೨೫%) |
| ಸಾಮಾನ್ಯ | ೭ | - | ೮ | - | (೨೫%) |
| ಒಟ್ಟು ಪ್ರತಿಶತ | ೨೧ (೩೫.೦೦) | ೦೯ (೧೫.೦೦) | ೨೨ (೩೬.೬೭) | ೮ (೧೩.೩೩) | ೬೦ (೧೦೦%) |

ಈ ಮೇಲಿನ ಕೋಷ್ಟಕದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಮರುವಿವಾಹವಾದ ಮಹಿಳೆಯರು ಎಷ್ಟು ಜನ ಎಂದು ತಿಳಿಯಬಹುದಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಪ.ಜಾತಿಯಲ್ಲಿ ವಿಧವೆಯರು ಪುನರ್ವಿವಾಹವಾದವರು ೪ ಜನ ಇದ್ದಾರೆ. ಮರುಮದುವೆಯಾಗದವರು ೪ ಜನ ಇದ್ದಾರೆ. ನಗರ ಪ್ರದೇಶದಲ್ಲಿ ಮರುವಿವಾಹವಾದವರು ಕೇವಲ ಎರಡು ಜನ ವಿಧವೆಯರು ಮಾತ್ರ. ನಗರ ಪ್ರದೇಶದಲ್ಲಿ ಮರುವಿವಾಹವಾಗದೆ ಹಾಗೆಯೇ ಉಳಿದವರು ೫ ಜನ ವಿಧವೆಯರು. ಪ.ಪಂಗಡದಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಿಧವೆಯರು ೬ ಜನ, ಮರುಮದುವೆಯಾದವರು ಕೇವಲ ಒಬ್ಬರು ಮಾತ್ರ. ನಗರ ಪ್ರದೇಶದಲ್ಲಿ ೩ ಜನ ವಿಧವೆಯರು ವಿಧವೆಯರಾಗಿಯೇ ಉಳಿದಿದ್ದಾರೆ. ೫ ಜನ ವಿಧವೆಯರು ಮರು ವಿವಾಹವಾಗಿದ್ದಾರೆ. ಹಿಂದುಳಿದ ವರ್ಗದವರಲ್ಲಿ ಗ್ರಾಮೀಣ ಪ್ರದೇಶದ ಮಹಿಳೆ ಅದರಲ್ಲೂ ವಿಧವೆಯಾಗಿ ೪ ಜನ ಉಳಿದಿದ್ದಾರೆ. ಮರುವಿವಾಹವಾದವರು ೪ಜನ ಇದ್ದಾರೆ. ಹಾಗೆಯೇ ನಗರ ಪ್ರದೇಶದಲ್ಲಿ ವಿಧವೆಯರು ೬ಜನ ಇದ್ದಾರೆ. ಮರುವಿವಾಹವಾದವರು ಒಬ್ಬರು ಮಾತ್ರ. ಸಾಮಾನ್ಯ ವರ್ಗದವರಲ್ಲಿ ಗ್ರಾಮೀಣ ಪ್ರದೇಶದಲ್ಲಿಯೇ ಆಗಲಿ ನಗರ ಪ್ರದೇಶದಲ್ಲಿಯೇ ಆಗಲಿ ವಿಧವೆಯರು ಮರುವಿವಾಹವಾಗಿಲ್ಲ.

ಒಟ್ಟು ಗ್ರಾಮೀಣ ಪ್ರದೇಶದಲ್ಲಿ ಎಲ್ಲಾ ಜಾತಿಯವರಲ್ಲಿ ೨೧ ಜನ(೩೫%) ಮಹಿಳೆಯರು ವಿಧವೆಯರಾಗಿಯೇ ಉಳಿದಿದ್ದಾರೆ. ೯ ಜನ ವಿಧವೆಯರು(೧೫%) ರಷ್ಟು ವಿಧವೆಯರು ಮರು ವಿವಾಹವಾಗಿ ದ್ದಾರೆ. ನಗರ ಪ್ರದೇಶದಲ್ಲಿ ವಿಧವೆಯರು ೨೨(೩೬.೬೬%)ರಷ್ಟು ವಿಧವೆಯರಾಗಿಯೇ ಉಳಿದಿದ್ದಾರೆ, ಕೇವಲ ೮ ಜನ(೧೩.೩೪%)ಜನರಷ್ಟು ವಿಧವೆಯರು ಮರುವಿವಾಹವಾಗಿದ್ದಾರೆ. ಹಳ್ಳಿಗಳಲ್ಲಿ ವಿಧವೆಯರಿಗೆ ಮರುವಿವಾಹ ಮಾಡುವರು ಕಾರಣ ಅವರಿಗೆ ಆರ್ಥಿಕವಾಗಿ ನೆಲೆ ಇರುವುದಿಲ್ಲ. ಮರುವಿವಾಹದ ಮೂಲಕ ಅವರಿಗೆ ಒಂದು ಸ್ಥಿರವಾದ ನೆಲೆ ದೊರೆತಂತಾಗುವುದು. ಹಳ್ಳಿಗಳಲ್ಲಿ ಉಡಿಕೆ ಎನ್ನುವ ಪದ್ಧತಿಯಲ್ಲಿ ಮರುವಿವಾಹ ಮಾಡುವರು. ನಗರ ಪ್ರದೇಶದಲ್ಲಿಯೇ ಆಗಲಿ ಗ್ರಾಮೀಣ ಪ್ರದೇಶದಲ್ಲಿಯೇ ಆಗಲಿ ವಿಧವೆಯರೆ ಹೆಚ್ಚಾಗಿ ಕಂಡುಬಂದಿದ್ದಾರೆ. ವಿಧವೆಯರಾಗಿ ಉಳಿಯಲು ಕಾರಣ ಸಂಪ್ರದಾಯ ಕುಟುಂಬದವರಾಗಿರುವುದರಿಂದ ಅವರು ಇನ್ನೊಬ್ಬ ಪುರುಷನನ್ನು ಮದುವೆಯಾಗಲು ಇಷ್ಟಪಡಲಿಲ್ಲ.

ಗ್ರಾಮೀಣ ಪ್ರದೇಶದಲ್ಲಿಯೇ ಆಗಲಿ ಅಥವಾ ನಗರ ಪ್ರದೇಶದಲ್ಲಿಯೇ ಆಗಲಿ ವಿಧವೆಯರು ಮರುವಿವಾಹವಾಗುವುದರಿಂದ ಎಲ್ಲಿ ನಮ್ಮ ಮೊದಲ ಪತಿಯ ಮಕ್ಕಳು ಅನಾಥರಾಗುತ್ತಾರೋ ಎನ್ನುವ ಭಯವಿರುವುದರಿಂದ ಅವರು ಮರುವಿವಾಹವಾಗಲು ಒಪ್ಪುವುದಿಲ್ಲ. ಅಲ್ಲದೆ ಒಂದು ವೇಳೆ ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾದವಳು ಮರುವಿವಾಹವಾಗುವಾಗ ತನ್ನ ಮೊದಲ ಪತಿಯ ಮಕ್ಕಳನ್ನು ತನ್ನ ತೌರು ಮನೆಯಲ್ಲಾದರೂ ಬಿಡಬೇಕಾಗುವುದು ಅಥವಾ ತನ್ನ ಮೊದಲ ಪತಿಯ ಮನೆಯಲ್ಲಾದರೂ

ಬಿಡಬೇಕಾಗಿದೆ. ಕೆಲವೊಂದು ಪುರುಷರು ಅಂದರೆ ಮರುವಿವಾಹವಾಗುವವರು ಅವಳ ಮಕ್ಕಳನ್ನು ತನ್ನ ಮಕ್ಕಳೆಂದು ತಿಳಿದಿದ್ದಾರೆ. ಈ ರೀತಿ ಅವಳು ಮರುವಿವಾಹವಾಗಲು ಸಮಾಜ, ಧರ್ಮ, ಮತ್ತು ಕೌಟುಂಬಿಕ ಕಾರಣಗಳಿರುವುದರಿಂದ ಅವಳು ಮರುವಿವಾಹವಾಗಲು ಒಪ್ಪಿಗೆ ಸೂಚಿಸುವುದಿಲ್ಲ.

ಅಲ್ಲದೆ ಮರುವಿವಾಹವಾಗುವಾಗ ಪತಿಗೆ ಮೊದಲನೆಯ ಹೆಂಡತಿಯ ಮಕ್ಕಳಿದ್ದರೆ ನೋಡಿಕೊಳ್ಳುವಿರಾ ಎಂದರೆ ಕೆಲವು ಮಹಿಳೆಯರು ಆ ಮಕ್ಕಳನ್ನು ನೋಡಿಕೊಳ್ಳುತ್ತೇವೆ ಎಂದಿದ್ದಾರೆ. ಇನ್ನು ಕೆಲವರು ನಾವು ಆ ಮಕ್ಕಳನ್ನು ನೋಡಿಕೊಳ್ಳಲಾಗುವುದಿಲ್ಲ ಎಂದು ಹೇಳಿದ್ದಾರೆ ಇನ್ನು ಕೆಲವರು ಆ ಮಕ್ಕಳನ್ನು ನಾವು ನೋಡಿ ಕೊಳ್ಳುತ್ತೇವೆ. ನಮ್ಮ ಮೊದಲ ಪತಿಯ ಮಕ್ಕಳನ್ನು ಇವರು ನೋಡಿಕೊಳ್ಳಬೇಕು ಎಂದಿದ್ದಾರೆ. ಇನ್ನು ಕೆಲವರು ನೋಡುವ ನೆಪ ಮಾತ್ರ ಮಾಡುವರು ಆದರೆ, ಮಕ್ಕಳನ್ನು ನೋಡಿಕೊಳ್ಳುವುದಿಲ್ಲ. ಹೆಚ್ಚಾಗಿ ಮರುವಿವಾಹವಾಗಿ ಹೋದವರು ತಮ್ಮ ಪತಿಯ ಮೊದಲನೆ ಮಕ್ಕಳನ್ನು ನೋಡಿಕೊಳ್ಳುತ್ತೇವೆ. ಕಾರಣ ಆ ಮಕ್ಕಳು ಸಹ ನಮ್ಮ ಮಕ್ಕಳೆ ಎಂದಿದ್ದಾರೆ.

ಗ್ರಾಮೀಣ ಮತ್ತು ನಗರ ಪ್ರದೇಶದ ವಿಧವೆಯರನ್ನು ಕುರಿತು ನೀವು ವಿವಾಹವಾಗಲಿರುವ ಪತಿಗೆ ಮೊದಲನೆ ಪತ್ನಿ ಇದ್ದಿದ್ದರೆ ಏನು ಮಾಡುತ್ತಿರಿ ಎಂದಾಗ ಗ್ರಾಮೀಣ ಪ್ರದೇಶ ಮಹಿಳೆಯರು ಹೀಗೆ ಹೇಳಿದರು : ಅವರನ್ನು ನಾವು ಹೊಂದಿಕೊಂಡು ಹೋಗುತ್ತೇವೆ ಎಂದಿದ್ದಾರೆ, ಇನ್ನು ಕೆಲವರು ಅವಳನ್ನು ಬೇರೆ ಮನೆ ಮಾಡಿ ಇಡಲು ಹೇಳುತ್ತೇವೆ ಎಂದಿದ್ದಾರೆ. ಇನ್ನು ನಗರ ಪ್ರದೇಶದಲ್ಲಿ ವಿಧವೆಯರನ್ನು ಸಂದರ್ಶಿಸಿದಾಗ ನಗರ ಪ್ರದೇಶದ ವಿಧವೆಯರು ವಿವಾಹವಾದಾಗ ಮೊದಲನೆ ಪತ್ನಿ ಇದ್ದಿದ್ದರೆ ಅವಳಿಂದ ವಿಚ್ಛೇದನೆ ಪಡೆಯಲು ಹೇಳುತ್ತೇವೆ. ಇಲ್ಲದಿದ್ದರೆ ಬೇರೆ ಮನೆಮಾಡಿ ಇರುತ್ತೇವೆ ಎಂದು ಹೇಳಿದವರೇ ಹೆಚ್ಚು ಕೆಲವರು ಮಾತ್ರ ಹೊಂದಿಕೊಂಡು ಹೋಗುತ್ತೇವೆ ಎಂದಿದ್ದಾರೆ.

**ಕೋಷ್ಟಕ ೪**

**ವಿಧವೆಯರಿಗಾಗಿ ಜಾರಿಗೆ ಬಂದ ಕಾನೂನುಗಳ ಬಗ್ಗೆ ಅರಿವು**

| ಜಾತಿವಾರು | ಗ್ರಾಮೀಣ | | ನಗರ | | ಒಟ್ಟು ಪ್ರತಿಶತ |
|---|---|---|---|---|---|
| | ಅರಿವಿದೆ | ಅರಿವಿಲ್ಲ | ಅರಿವಿದೆ | ಅರಿವಿಲ್ಲ | |
| ಪ.ಜಾತಿ | ೨ | ೬ | ೪ | ೩ | ೧೫(೨೫%) |
| ಪ.ಪಂಗಡ | ೧ | ೬ | ೫ | ೩ | ೧೫ (೨೫%) |
| ಹಿಂದುಳಿದವರ್ಗ | ೩ | ೫ | ೩ | ೪ | ೧೫ (೨೫%) |
| ಸಾಮಾನ್ಯ | ೩ | ೪ | ೬ | ೨ | ೧೫ (೨೫%) |
| ಒಟ್ಟು ಪ್ರತಿಶತ | ೯(೧೫%) | ೨೧(೩೫%) | ೧೮(೩೦%) | ೧೨(೨೦%) | ೬೦(೧೦೦%) |

ಈ ಮೇಲಿನ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಪ.ಜಾತಿಯಲ್ಲಿ ವಿಧವೆಯರು ಅಕ್ಷರಸ್ಥರಾಗಿದ್ದರು ಸಹ ಕಾನೂನಿನ ಬಗ್ಗೆ ಅರಿವಿಲ್ಲ ಎಂದಿದ್ದಾರೆ. ಅದರಲ್ಲೂ ಗ್ರಾಮೀಣ ಪ್ರದೇಶದ ಮಹಿಳೆಯರು ೬ ಜನ ವಿಧವೆಯರು ತಮಗೆ ಕಾನೂನಿನ ಬಗ್ಗೆ ಅರಿವಿಲ್ಲ ಎಂದು ಹೇಳಿದ್ದಾರೆ. ಆದರೆ ಗ್ರಾಮೀಣ ಪ್ರದೇಶದಲ್ಲಿಯೇ ತಿಳುವಳಿಕೆಯಿಲ್ಲದ ವಿಧವೆಯರಿದ್ದಾರೆ. ನಗರ ಪ್ರದೇಶದಲ್ಲಿ ಕೇವಲ ೩ ಜನ ವಿಧವೆಯರಿಗೆ ಅರಿವಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಕೇವಲ ಇಬ್ಬರು ಮಹಿಳೆಯರಿಗೆ ವಿಧವೆಯರಿಗಾಗಿ ಜಾರಿಗೆ ತಂದ ಕಾನೂನುಗಳು ಅಂದರೆ ವಿಧವಾ ಪುನರ್ವಿವಾಹ, ದತ್ತು ಸ್ವಿಕಾರ, ಆಸ್ತಿ ಹಕ್ಕಿನ ಬಗ್ಗೆ ಅರಿವಿದೆ ಎಂದಿದ್ದಾರೆ. ಅಲ್ಲದೆ ಸಾಮಾನ್ಯವಾಗಿ ನಗರ ಪ್ರದೇಶದ ಮಹಿಳೆಯು ಸ್ವಲ್ಪ ಮಟ್ಟಿಗಾದರೂ ಶಿಕ್ಷಣ ಪಡೆದಿರುವುದರಿಂದ ೪ ಜನ ವಿಧವೆಯರಿಗೆ ಈ ಕಾನೂನುಗಳ ಬಗ್ಗೆ ಅರಿವಿದೆ ಎಂದಿದ್ದಾರೆ.

ಹಾಗೆಯೇ ಪ.ಪಂಗಡದ ವಿಧವೆಯರಲ್ಲಿ ಅದರಲ್ಲೂ ಗ್ರಾಮೀಣ ಪ್ರದೇಶದ ವಿಧವೆಯರಲ್ಲಿ ಕೇವಲ ಒಬ್ಬ ಮಹಿಳೆಗೆ ಮಾತ್ರ ಈ ಕಾನೂನುಗಳ ಬಗ್ಗೆ ಅರಿವಿದೆ ಇನ್ನು ೬ ಜನ ವಿಧವೆಯರಿಗೆ ಕಾನೂನುಗಳ ಬಗ್ಗೆ ಅರಿವೆ ಇಲ್ಲದಾಗಿದೆ. ನಗರ ಪ್ರದೇಶದಲ್ಲಿ ಸ್ವಲ್ಪ ಮಟ್ಟಿಗೆ ಸುಧಾರಿಸಿದೆ ೫ ಜನ ವಿಧವೆಯರು ಕಾನೂನಿನ ಬಗ್ಗೆ ಅರಿವಿದೆ ಎಂದು ಹೇಳಿದ್ದಾರೆ. ಇನ್ನು ಮೂರು ಜನ ವಿಧವೆಯರು ಅರಿವಿಲ್ಲ ಎಂದಿದ್ದಾರೆ.

ಹಿಂದುಳಿದ ವರ್ಗದವರಲ್ಲಿಯೂ ಸಹ ಅದರಲ್ಲೂ ಗ್ರಾಮೀಣ ಪ್ರದೇಶದ ವಿಧವೆಯರಿಗೆ ಕೇವಲ ಮೂರು ಜನ ವಿಧವೆಯರಿಗೆ ಕಾನೂನುಗಳ ಬಗ್ಗೆ ಅರಿವಿದೆ, ೫ ಜನ ವಿಧವೆಯರಿಗೆ ಅರಿವಿಲ್ಲ. ಹಾಗೆಯೇ ನಗರ ಪ್ರದೇಶದ ವಿಧವೆಯರಿಗೆ ೩ ಜನ ವಿಧವೆಯರಿಗೆ ಅರಿವಿದೆ, ೪ ಜನ ವಿಧವೆಯರಿಗೆ ಅರಿವಿಲ್ಲ ಎಂದಿದ್ದಾರೆ. ಹಾಗೆಯೇ ಸಾಮಾನ್ಯವರ್ಗದವರಲ್ಲಿ ಗ್ರಾಮೀಣ ಪ್ರದೇಶದಲ್ಲಿ ೩ ಜನ ವಿಧವೆಯರಿಗೆ ಅರಿವಿದೆ, ೪ ಜನ ವಿಧವೆಯರಿಗೆ ಅರಿವಿಲ್ಲ. ನಗರ ಪ್ರದೇಶದಲ್ಲಿ ೬ ಜನ ವಿಧವೆಯರಿಗೆ ಅರಿವಿದೆ, ಇಬ್ಬರು ಜನ ವಿಧವೆಯರಿಗೆ ಮಾತ್ರ ಅರಿವಿಲ್ಲ.

ಈ ರೀತಿಯ ಅರಿವಿಲ್ಲದಕ್ಕೆ ಮೂಲ ಕಾರಣ ಶಿಕ್ಷಣ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರನ್ನು ಎರಡನೇ ದರ್ಜೆಯ ಪ್ರಜೆಯಾಗಿಸುವುದರಿಂದ ಅವಳನ್ನು ಕೀಳಾಗಿ ಕಾಣಲಾಗಿದೆ. ವಿಧವೆಯರಿಗಾಗಿ ಎಲ್ಲಾ ರೀತಿಯ ಕಾನೂನುಗಳು ಜಾರಿಗೆ ಬಂದರು ಸಹ ಅವು ಸಮಾಜದಲ್ಲಿ ಇಂದಿಗೂ ಸಹ ರೂಢಿಯಲಿಲ್ಲ. ತಿಳುವಳಿಕೆಯುಳ್ಳವರು ಸಹ ರೂಢಿಸಿಕೊಂಡರೆ ಅವರು ಸಮಾಜದ ನಿಂದನೆಗೆ ಗುರಿಯಾಗಬೇಕಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಕಾನೂನಿನ ಬಗ್ಗೆ ಅರಿವಿದ್ದ ಎಲ್ಲಾ ಜಾತಿಯ ವಿಧವೆಯರು ಒಟ್ಟು ೯ ಜನ(೧೫%) ಜನ ಮಾತ್ರ. ನಗರಪ್ರದೇಶದಲ್ಲಿ ೧೮ ಜನ (೩೦%)ಜನ ವಿಧವರೆಯರು ಮಾಹಿತಿಯನ್ನು, ತಿಳುವಳಿಕೆ ಯುಳ್ಳವರಾಗಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ತಿಳುವಳಿಕೆಯಿಲ್ಲದವರು ೨೧ ಜನ(೩೫%)ರಷ್ಟು

ವಿಧವೆಯರಿಗೆ ಕಾನೂನಿನ ಬಗ್ಗೆ ಅರಿವೆ ಇಲ್ಲದಾಗಿದೆ. ನಗರ ಪ್ರದೇಶದಲ್ಲಿ ೧೨ಜನ (೨೦%) ರಷ್ಟು ವಿಧವೆಯರಿಗೆ ಅರಿವಿಲ್ಲ. ಆದುದರಿಂದ ಗ್ರಾಮೀಣ ಪ್ರದೇಶದಲ್ಲಿ ಸಂಘ-ಸಂಸ್ಥೆಗಳು ಹೆಚ್ಚಿನ ಶ್ರಮವಹಿಸಿ ಮಹಿಳೆಯರಿಗೆ ತಿಳುವಳಿಕೆಯನ್ನು ಮೂಡಿಸಬೇಕಾಗಿದೆ. ಇಲ್ಲವಾದರೆ ಅವರ ಜೀವನವು ತುಂಬಾ ಶೋಚನೀಯವಾಗುವುದು.

ವಿಧವೆಯರಿಗಾಗಿ ಅನೇಕ ಸಂಘಸಂಸ್ಥೆಗಳು ಹೋರಾಡುತ್ತಿವೆ. ಆದರೆ, ಅಜ್ಞಾನಿಗಳಾಗಿರುವುದರಿಂದ ವಿಧವೆಯರಿಗಾಗಿ ಸಂಘಸಂಸ್ಥೆಗಳಿವೆ ಎನ್ನುವುದನ್ನೆ ಎಷ್ಟೋ ಜನ ವಿಧವೆಯರಿಗೆ ಅರಿವಿಲ್ಲ. ಕೆಲವು ವಿಧವೆಯರು ಅದರಲ್ಲೂ ಶಿಕ್ಷಣ ಪಡೆದಂಥಹ ವಿಧವೆಯರು ಸಂಘಸಂಸ್ಥೆಗಳ ಮೂಲಕ ತಮಗೆ ದೊರೆಯಬೇಕಾದಂತಹ ಹಕ್ಕುಗಳನ್ನು ಪಡೆಯುತ್ತಿದ್ದಾಳೆ. ನಗರ ಪ್ರದೇಶದ ಮಹಿಳೆಯು ಶಿಕ್ಷಣವನ್ನು ಪಡೆದಿರುವುದರಿಂದ ಅವಳಿಗೆ ಸ್ವಾವಲಂಬಿಯಾಗಿ ಬದುಕುವೆನು ಎನ್ನುವ ಆತ್ಮವಿಶ್ವಾಸ ಮೂಡುವುದು ಅದರಲ್ಲೂ ಕಾನೂನನ್ನು ಅರಿತಿರುವುದರಿಂದ ವಿಧವೆಯು ಧೈರ್ಯ ಗುಂದದೆ ಕೆಲವರು ಮಾತ್ರ ಈ ಸಂಘಸಂಸ್ಥೆಗಳ ಉಪಯೋಗವನ್ನು ಪಡೆಯುತ್ತಲಿದ್ದಾರೆ.

ಅದರಲ್ಲೂ ವೃದ್ಧಾಪ್ಯದಲ್ಲಿ ವಿಧವೆಯಾದಂತಹ ಮಹಿಳೆಯರು ತಮ್ಮ ಮಕ್ಕಳು ಮತ್ತು ಸೊಸೆ ನೋಡಿಕೊಳ್ಳಲಿಲ್ಲವೆಂದರೆ, ಅವಳನ್ನು ಮನೆಯಿಂದ ಹೊರಗಟ್ಟಿದರೆ ಅಂಥಹ ವಿಧವೆಯರು ಆಶ್ರಮದ ಸೌಲತ್ತನ್ನು ಪಡೆದಿದ್ದಾರೆ. ಅಲ್ಲದೆ ವಿಧವಾ ವೇತನವನ್ನು ಸಹ ಪಡೆಯುತ್ತಲಿದ್ದಾರೆ. ಈ ಸೌಲತ್ತುಗಳನ್ನು ಪಡೆದವರಲ್ಲಿ ಹೆಚ್ಚಾಗಿ ನಗರವಾಸಿಗಳೇ ಇದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಸಂಘ-ಸಂಸ್ಥೆಗಳ ಅಭಾವವಿರುವುದರಿಂದ ವೃದ್ಧಾಪ್ಯದಲ್ಲಿಯೂ ಸಹ ಮಹಿಳೆಯು(ವಿಧವೆಯೂ) ಕೂಲಿಯನ್ನು ಮಾಡಿ ಜೀವನ ಸಾಗಿಸುತ್ತಿದ್ದಾಳೆ.

## ವಿಧವಾ ಸಮಸ್ಯೆಯ ಬಗ್ಗೆ ಕೆಲಸ ಮಾಡುತ್ತಿರುವ ಕೆಲವು ಸಂಘಸಂಸ್ಥೆಗಳು ಮತ್ತು ಸಮಾಜ ಕಾರ್ಯಕರ್ತೆಯರ ಪಾಲು

ವಿಧವೆಯರ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಅನೇಕ ಸಂಘಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಕ್ಷೇತ್ರಕಾರ್ಯದ ಮೂಲಕ ಅನೇಕ ಸಂಘಸಂಸ್ಥೆಗಳಿಗೆ ಮತ್ತು ಸಮಾಜ ಕಾರ್ಯಕರ್ತರನ್ನು ಭೇಟಿ ಮಾಡಿ ಅವರೊಂದಿಗೆ ವಿಧವೆಯರ ಸಮಸ್ಯೆಗಳನ್ನು ಕುರಿತು ಸಂದರ್ಶಿಸಲಾದೆ. ಈ ರೀತಿ ಸಂದರ್ಶನದ ಮೂಲಕ ಮಾಹಿತಿಯನ್ನು ತಿಳಿದು ಕೊಳ್ಳಲಾಗಿದೆ. ಅನೇಕ ಸಮಾಜ ಕಾರ್ಯಕರ್ತೆಯರು ವಿಧವೆಯರನ್ನು ಕುರಿತು ಈ ರೀತಿ ಹೇಳಿಕೆ ನೀಡಿದ್ದಾರೆ.

## ಪಾರ್ವತಿ ಬಿ. ಕಟ್ಟಿಮನಿ

ಕರ್ನಾಟಕ ಸರ್ವೋದಯ ಸೇವಾಸಂಘದ ಅಧ್ಯಕ್ಷರು ಆದ ಪಾರ್ವತಿ.ಬಿ ಕಟ್ಟಿಮನಿಯವರನ್ನು ಸಂದರ್ಶಿಸಲಾಗಿದೆ. ಇವರ ಪತಿಯು ಮೊದಲು ಈ ಸಂಘವನ್ನು ನಡೆಸಿಕೊಂಡು ಹೋಗುತ್ತಿದ್ದರು. ಪತಿಯ ಮರಣದ ನಂತರ ಪಾರ್ವತಿ.ಬಿ ಕಟ್ಟಿಮನಿಯವರು ಈ ಸಂಘದ ಅಧ್ಯಕ್ಷತೆಯ ಸ್ಥಾನವನ್ನು ವಹಿಸಿದರು. ಈ ಸಂಘವನ್ನು ೧೯೬೪ರಲ್ಲಿ ಸ್ಥಾಪಿಸಿದರು. ಈ ಸಂಘವು ಮಹಿಳೆಯರ ಅಲ್ಪಾವದಿ ವಸತಿಗೃಹವೆಂದು ಸ್ಥಾಪಿಸಲಾಗಿದೆ. ಇದು ಗುಲಬರ್ಗಾ ಜಿಲ್ಲೆಯ ಕರುಣೇಶ್ವರ ನಗರದ ಬಡಾವಣೆಯಲ್ಲಿದೆ. ಈ ಸಂಘವು ಅನೇಕ ರೀತಿಯ ಮಹಿಳೆಯರಿಗೆ ಅಂದರೆ ಚರಿತ್ರೆಗೆ ದಕ್ಕೆ ಬಂದಂಥ ಮಹಿಳೆಯರಿಗೆ, ದೌರ್ಜನ್ಯಕ್ಕೆ ಒಳಗಾದ ಮಹಿಳೆಯರಿಗೆ, ಗಂಡನಿಂದ ಬಿಡುಗಡೆ ಹೊಂದಿದ ಮಹಿಳೆಯರಿಗೆ, ನಿರ್ಗತಿಕ ಮಹಿಳೆಯರಿಗೆ ಮತ್ತು ವಿಧವೆಯರಿಗೆ ಭಾರತ ಸರ್ಕಾರದ ನೆರವಿನಿಂದ ಮಹಿಳೆಯರಿಗೆ ವಸತಿ ಗೃಹದ ವ್ಯವಸ್ಥೆಯನ್ನು ಮಾಡಲಾಗಿದೆ. ಪಾರ್ವತಿ.ಬಿ ಕಟ್ಟಿಮನಿಯವರು ಸ್ವತಃ ವಿಧವೆಯಾಗಿ ಅವರು ತಮ್ಮ ಪತಿಯ ಮರಣದ ನಂತರ ಧೈರ್ಯಗುಂದದೆ ಈ ವಸತಿ ಗೃಹವನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಅಲ್ಲದೆ ಅವರು ಸ್ವಾವಲಂಬಿಯಾಗಿ ಬದುಕುತ್ತಿದ್ದಾರೆ. ಮಗಳಿಗೆ ಶಿಕ್ಷಣದ ಅವಕಾಶವನ್ನು ನೀಡುತ್ತಿದ್ದಾರೆ.

ಈ ವಸತಿ ಗೃಹದಲ್ಲಿ ವಿಧವೆಯರಿಗೆ ಊಟ, ಉಚಿತ ಚಿಕಿತ್ಸೆಯನ್ನು ನೀಡುವರು ಜೊತೆಗೆ ಅವಳಿಗೆ ಸ್ವಾವಲಂಬಿಯಾಗಿ ಬದುಕಲು ಪ್ರೇರೇಪಿಸುತ್ತಿದ್ದಾರೆ. ಇಲ್ಲಿಯ ಮಹಿಳೆಯರಿಗೆ ಕುಶಲಕಲೆಯ ತರಬೇತಿಯನ್ನು ನೀಡುತ್ತಿದ್ದಾರೆ. ಇಲ್ಲಿ ಸುಮಾರು ೧೮ ರಿಂದ ೪೫ ವರ್ಷವಯಸ್ಸಿನ ವಿಧವೆಯರು ಇದರ ಸೌಲತ್ತನ್ನು ಪಡೆಯುತ್ತಿದ್ದಾರೆ. ಈ ಆಶ್ರಮದಲ್ಲಿ ಅನೇಕ ವಿಧವೆಯರು ಪ್ರಯೋಜನವನ್ನು ಪಡೆದುಕೊಂಡು ಸ್ವಾವಲಂಬಿಯಾಗಿ ಬದುಕುತ್ತಿದ್ದಾರೆ. ಸದ್ಯಕ್ಕೆ ವಿಧವೆಯರು ಒಟ್ಟು ಐದುಜನ ಈ ವಸತಿಗೃಹದ ಉಪಯೋಗವನ್ನು ಪಡೆದುಕೊಳ್ಳುತ್ತಿದ್ದಾರೆ. ಈ ವಸತಿ ಗೃಹದಲ್ಲಿ ವಿಧವೆಯರು ಗಂಡನಿಂದ ಪಡೆಯ ಬೇಕಾದ ಆಸ್ತಿಯು ಸಿಗದೇ ಇದ್ದಾಗ ಆ ಆಸ್ತಿಯನ್ನು ಪಡೆಯಲು ಕೋರ್ಟಿಗೆ ಹಾಕಿದಾಗ ಅವರ ಗಂಡನ ಮನೆಯಿಂದ ಅವರನ್ನು ಹೊರಗಟ್ಟಿದಂತಹ ಮಹಿಳೆಯರು ಸಹ ಈ ವಸತಿಗೃಹದಲ್ಲಿ ಆಶ್ರಯವನ್ನು ಪಡೆಯುತ್ತಿದ್ದಾರೆ. ಈ ವಸತಿಗೃಹದಲ್ಲಿ ತರಬೇತಿಯಲ್ಲದೆ ಬೇರೆ ಕಡೆಯಿಂದ ಸಹ ತರಬೇತಿಯನ್ನು ಪಡೆಯಲು ಅನುಕೂಲ ಮಾಡಿಕೊಟ್ಟಿದೆ. ಈ ವಸತಿ ಗೃಹದಲ್ಲಿ ವಾಸಿಸುವ ವಿಧವೆಯರು ಪುನರ್ವಿವಾಹ ಮಾಡಿಕೊಳ್ಳಲು ಬಯಸಿದರೆ ಅವರಿಗೆ ಪುನರ್ವಿವಾಹ ಮಾಡಿಕೊಳ್ಳಲು ಅನುಕೂಲ ಮಾಡಿಕೊಡಲಾಗಿದೆ ಎಂದು ಪಾರ್ವತಿ ಬಿ. ಕಟ್ಟಿಮನಿಯವರು ಸಂದರ್ಶನದ ಸಮಯದಲ್ಲಿ ತಿಳಿಸಿದ್ದಾರೆ.

ಪಾರ್ವತಿ ಬಿ. ಕಟ್ಟಿಮನಿಯವರು ಹೀಗೆ ಹೇಳಿದ್ದಾರೆ. ವಿಧವೆಯರು ಶಿಕ್ಷಣವನ್ನು ಪಡೆದು ಅವರು ಸ್ವಾವಲಂಬಿಯಾಗಿ ಬದುಕಲು ಪ್ರಯತ್ನಿಸುತ್ತಿದ್ದಾರೆ. ಮೊದಲಿನ ವಿಧವೆಯರ ಹಾಗೆ ಈಗೀನ ವಿಧವೆಯರು

ಅಷ್ಟೊಂದು ಶೋಚನೀಯವಾದ ಬದುಕನ್ನು ನಡೆಸುತ್ತಿಲ್ಲ. ಮರುವಿವಾಹವಾಗುವ ಹಕ್ಕನ್ನು ಪಡೆದುಕೊಂಡಿರುವುದರಿಂದ ವಿಧವೆಯು ಒಂಟಿಯಾಗಿ ಬಾಳದೆ ಸಂಗಾತಿಯನ್ನು ಪಡೆದು ಹೊಸ ಜೀವನವನ್ನು ಪ್ರಾರಂಭಿಸುವ ಅಧಿಕಾರವನ್ನು ಹೊಂದಿದ್ದಾಳೆ. ಒಂದು ವೇಳೆ ವಿಧವೆಯಾಗಿಯೇ ಉಳಿದರೆ ಅವಳು ಪತಿಯ ಆಸ್ತಿಯಿಂದ ಪಾಲನ್ನು ಪಡೆದುಕೊಂಡು ಸ್ವಲ್ಪಮಟ್ಟಿಗಾದರು ಒಳ್ಳೆಯ ಜೀವನವನ್ನು ನಡೆಸುತ್ತಿದ್ದಾಳೆ ಎಂದು ಹೇಳಿದರು.

ಇಂದಿರಾ ಮಾನ್ವೀಕರ

ಸಂಗಮೇಶ್ವರ ಮಹಿಳಾ ಮಂಡಳದ ಕುಟುಂಬ ಸಲಹಾಕೇಂದ್ರದ ಅಧ್ಯಕ್ಷರಾದ ಇಂದಿರಾ ಮಾನ್ವೀಕರ ಅವರನ್ನು ಸಂದರ್ಶಿಸಲಾಗಿದೆ. ಗುಲಬರ್ಗಾ ನಗರದಲ್ಲಿ ಕೇಂದ್ರ ಸರ್ಕಾರದ ಸಮಾಜ ಕಲ್ಯಾಣ ಮಂಡಳಿ ನವದೆಹಲಿ ವತಿಯಿಂದ ಸಂಗಮೇಶ್ವರ ಮಹಿಳಾಮಂಡಳ ಸಂಗಮೇಶ್ವರ ನಗರದಲ್ಲಿ ಕುಟುಂಬ ಸಲಹಾಕೇಂದ್ರವು ೧೯೯೨-೯೩ರಲ್ಲಿ ಸ್ಥಾಪಿಸಲಾಗಿದೆ. ಈ ಕುಟುಂಬ ಸಲಹಾಕೇಂದ್ರವು ವಿಧವೆಯರಿಗೆ ಆಸ್ತಿಯ ಹಕ್ಕನ್ನು, ಕಾನೂನಿನ ಮೂಲಕ ಒದಗಿಸಿಕೊಡಲಾಗಿದೆ. ಈ ಸಂಘದವರು ಕನ್ನಡ ಮತ್ತು ಇಂಗ್ಲೀಷ್ ಶಿಕ್ಷಣದ ಶಾಲೆಯನ್ನು ನಡೆಸಿಕೊಂಡು ಹೋಗುತ್ತಲಿದ್ದಾರೆ. ಅಲ್ಲದೆ ಹೊಲಿಗೆಯ ತರಬೇತಿಯನ್ನು ಸಹ ನೀಡುವರು. ಇಂದಿರಾ ಮಾನ್ವೀಕರ ಅವರ ಪ್ರಕಾರ ವಿಧವೆಯರು ಮರುವಿವಾಹವಾಗುವುದರಿಂದ ಉತ್ತಮ ಜೀವನವನ್ನು ನಡೆಸಲು ಅನುಕೂಲವಾಗುವುದು. ಕಾರಣ ಅವಳಿಗೆ ಒಂದು ರೀತಿಯ ಆರ್ಥಿಕವಾದ ನೆಲೆದೊರೆಯುವುದು. ಮಾನಸಿಕ ನೆಮ್ಮದಿ ದೊರೆಯುವುದು. ಸದಾ ಪುರುಷನ ಆಶ್ರಯದಲ್ಲಿ ಬದುಕುವ ಮಹಿಳೆಯು ಒಮ್ಮೆಲೆ ಪತಿಯನ್ನು ಕಳೆದುಕೊಂಡ ಮೇಲೆ ಅವಳೂ ಬದುಕುವುದೇ ತುಂಬಾ ಕಷ್ಟಕರವಾಗುವುದು ಇದರಿಂದ ಅವಳು ಮರುಮದುವೆಯಾಗಿ ಉತ್ತಮ ರೀತಿಯ ಜೀವನ ನಡೆಸಲು ಅನುಕೂಲವಾಗುವುದು ಎಂದಿದ್ದಾರೆ. ಒಂದು ವೇಳೆ ಅವಳು ಮರುವಿವಾಹವಾಗಲು ಒಪ್ಪಿಗೆ ಇದ್ದರೆ ಅವಳು ಪತಿಯ ಆಸ್ತಿಯನ್ನು ಪಡೆದು ಪತಿಯ ಮನೆಯಲ್ಲಿಯೇ ಇರಬೇಕು. ಅಥವಾ ಪತಿಯಿಂದಲು ಆಸ್ತಿ ಇರದಿದ್ದರೆ ಅವಳು ಸ್ವಾವಲಂಬಿಯಾಗಿ ಬದುಕಲು ಶಿಕ್ಷಣವನ್ನು ಪಡೆದು ಉದ್ಯೋಗವನ್ನು ಮಾಡಬೇಕು. ಅಥವಾ ವ್ಯಾಪಾರವನ್ನು ಮಾಡಬೇಕು ಎಂದು ಹೇಳಿದ್ದಾರೆ. ಮಹಿಳೆಯರು ಇಂದು ಶಿಕ್ಷಣವನ್ನು ಪಡೆಯುತ್ತಿರುವುದರಿಂದ ಮೊದಲು ವಿಧವೆಯರು ಪಡುತ್ತಿರುವ ಶ್ರಮಕ್ಕಿಂತಲೂ ಅತಿ ಕಡಿಮೆಯ ಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ಇವರು ಸಮಾಜದಲ್ಲಿ ಉಳಿದ ಮಹಿಳೆಯರ ಹಾಗೆ ಉತ್ತಮವಾದ ಸ್ಥಾನಮಾನವನ್ನು ಪಡೆಯುತ್ತಿದ್ದಾರೆ. ಮದುವೆ ಮುಂತಾದ ಕಾರ್ಯಕ್ರಮದಲ್ಲಿ ಇಂದಿನ ವಿಧವೆಯೂ ಭಾಗವಹಿಸುತ್ತಿದ್ದಾಳೆ ಎಂದು ಹೇಳಿದ್ದಾರೆ. ಒಟ್ಟಾರೆಯಾಗಿ ಇಂದಿನ ಮಹಿಳೆಯು ಸ್ವಲ್ಪ ಮಟ್ಟಿಗಾದರೂ ಉತ್ತಮವಾದ ಜೀವನವನ್ನು ನಡೆಸುತ್ತಿದ್ದಾಳೆ ಎಂದು ಸಮಾಜ ಕಾರ್ಯಕರ್ತೆಯಾದ

ಇಂದಿರಾ ಮಾನ್ವೀಕರ ಅವರು ವಿಧವೆಯರ ಜೀವನದ ಬಗ್ಗೆ ಅರಿತುಕೊಂಡು ಅವರ ಸ್ಥಿತಿಗತಿಗಳ ಬಗ್ಗೆ ಸೂಕ್ತವಾಗಿ ವಿವರಿಸಿದರು.

**ದೇವಿಂದ್ರಪ್ಪ ಕಟ್ಟಿಮನಿ**

ಗುಲಬರ್ಗಾ ಜಿಲ್ಲೆಯ ಶಕ್ತಿನಗರದ SARDS (social Awarness and Rural Development society)ಯ (Director) ನಿರ್ದೇಶಕರಾದ ದೇವಿಂದ್ರಪ್ಪ ಕಟ್ಟಿಮನಿಯವರನ್ನು ಸಂದರ್ಶಿಸಲಾಗಿದೆ. ಇವರು ಹೀಗೆ ಹೇಳಿದರು. ವಿಧವೆಯರಿಗೆ ಆಸ್ತಿ ಹಕ್ಕು, ಮರುಮದುವೆಯಾಗುವ ಹಕ್ಕು, ದತ್ತು ಸ್ವೀಕರಾದ ಹಕ್ಕು, ಈ ರೀತಿಯ ಅನೇಕ ಹಕ್ಕುಗಳು ಜಾರಿಗೆ ಬಂದಿವೆ. ಆದರೆ ಯಾವುದೇ ಹಕ್ಕುಗಳು ಸಮಾಜದಲ್ಲಿ ರೂಢಿಗೆ ಬಂದಿಲ್ಲ. ವಿಧವೆಯರು ಮರುವಿವಾಹವಾಗಬೇಕೆಂದು ಬಯಸಿದರು ಅವರು ಸಮಾಜಕ್ಕೆ ಹೆದರಿ ಸಮಾಜದ ಜನರು ತಮ್ಮನ್ನು ಕಡೆಗಣಿಸುವರು ಎಂಬ ಭಯದಿಂದ ಅವರು ಮರುಮದುವೆಯ ಆಸೆಯನ್ನು ತೆಗೆಯುವರು. ಆದರೆ ಇಂದಿನ ಮಹಿಳೆಯರು ಶಿಕ್ಷಣವನ್ನು ಪಡೆಯುತ್ತಿರುವುದರಿಂದ ಸ್ವಲ್ಪಮಟ್ಟಿಗಾದರೂ ಧೈರ್ಯದಿಂದ ಮರುಮದುವೆಯಾಗಲು ಮುಂದೆ ಬಂದಿದ್ದಾರೆ. ಕೆಲವೊಂದು ಕಡೆ ಮಾತ್ರ ವಿಧವೆಯರು ಮರುಮದುವೆಯಾಗುತ್ತಿದ್ದಾರೆ. ಅದರಲ್ಲೂ ಮೇಲ್ಜಾತಿಯ ಮಹಿಳೆಯರು ಮರುವಿವಾಹವಾಗುವುದು ಕಷ್ಟಕರವಾದರು ಅವರು ಸಹ ಧೈರ್ಯದಿಂದ ಕೆಲವೊಂದು ಮಹಿಳೆಯರು ಮರು ವಿವಾಹವಾಗುತ್ತಿದ್ದಾರೆ. ಕೆಳಜಾತಿಗಳಲ್ಲಿ ಪ್ರಾಚೀನ ಕಾಲದಿಂದಲೂ ವಿಧವಾವಿವಾಹವು ಜಾರಿಯಲ್ಲಿದೆ. ಇಂದಿಗೂ ಸಹ ವಿಧವೆಯರು ಮರುವಿವಾಹವಾಗುತ್ತಲಿದ್ದಾರೆ.

ವಿಧವಾ ಮಹಿಳೆಯೂ ಅದರಲ್ಲೂ ಗ್ರಾಮೀಣ ಪ್ರದೇಶದ ಅಶಿಕ್ಷಿತ ಮಹಿಳೆಯು ತುಂಬಾ ತೊಂದರೆಯನ್ನು ಅನುಭವಿಸುತ್ತಿದ್ದಾಳೆ. ಅವಳಿಗೆ ಕಾನೂನಿನ ಅರಿವೆ ಇಲ್ಲದಾಗಿದೆ. ಅದುದರಿಂದ ಪತಿಯ ಆಸ್ತಿಯಲ್ಲಿ ಪಾಲನ್ನು ಪಡೆಯುವುದು ಅವಳಿಗೆ ತೊಂದರೆಯಾಗುತ್ತಲಿದೆ. ಆದರೆ ನಗರ ಪ್ರದೇಶದ ಕೆಲವೊಂದು ಶಿಕ್ಷಿತ ಮಹಿಳೆಯರು ಪತಿಯ ಆಸ್ತಿಯಲ್ಲಿ ಪಾಲನ್ನು ಪಡೆದಿದ್ದಾರೆ. ಇನ್ನು ಪಡೆಯಲು ಪ್ರಯತ್ನಿಸುತ್ತಿದ್ದಾರೆ. ಅಲ್ಲದೆ ಶಿಕ್ಷಿತ ವಿಧವೆಯು ಉದ್ಯೋಗವನ್ನು ಮಾಡುವುದರಿಂದ ಅವಳು ಮನೆಯ ಸದಸ್ಯರಿಗೆ ಅವಲಂಬಿತವಾಗಿ ಜೀವನವನ್ನು ನಡೆಸದೆ, ಸ್ವಾವಲಂಬಿಯಾಗಿ ಜೀವನವನ್ನು ನಡೆಸುತ್ತೇನೆ ಎನ್ನುವ ಧೈರ್ಯ ಬಂದಿದೆ. ಅಲ್ಲದೆ ಉದ್ಯೋಗ ಮಾಡುವುದರಿಂದ ಅವಳ ಆರ್ಥಿಕಸ್ಥಿತಿಯು ಸುಧಾರಣೆಯಲ್ಲಿದೆ. ಆದರೆ ಗ್ರಾಮೀಣ ಪ್ರದೇಶದ ಮಹಿಳೆಯು ಕೂಲಿಯನ್ನೇ ಅವಲಂಬಿಸಿರುವುದರಿಂದ ಅವಳೂ ಗಂಡನ ಮನೆಗೆ ಅಥವಾ ತೌರುಮನೆಯವರಿಗೆ ಅವಲಂಬಿತವಾಗಿ ಜೀವನವನ್ನು ನಡೆಸುತ್ತಿದ್ದಾಳೆ. ಇದರಿಂದ ಗ್ರಾಮೀಣ ಪ್ರದೇಶದ ಮಹಿಳೆಯರು ನಗರ ಪ್ರದೇಶದ ಮಹಿಳೆಯರಿಗಿಂತ ಸ್ವಲ್ಪ ಕಷ್ಟದ ಜೀವನವನ್ನು ನಡೆಸುತ್ತಿದ್ದಾಳೆ. ಅಲ್ಲದೆ ಗ್ರಾಮಗಳಲ್ಲಿ ಸಂಪ್ರದಾಯಸ್ಥ ಕುಟುಂಬಗಳು ಇರುವುದರಿಂದ

ಇನ್ನು ಕೆಲವೊಂದು ಆಚರಣೆಗಳೂ ರೂಢಿಯಲ್ಲಿವೆ. ಆದರೆ ನಗರದ ಮಹಿಳೆಯರು ಸ್ವಲ್ಪಮಟ್ಟಿಗಾದರೂ ವಿಧವಾ ಆಚರಣೆಗಳಿಂದ ಹೊರಬಂದಿದ್ದಾರೆ. ಅವಳು ಮನೆಯ ನಾಲ್ಕು ಗೋಡೆಗಳ ಮಧ್ಯೆ ಜೀವನವನ್ನು ನಡೆಸದೆ ನಾನು ಒಬ್ಬಳು ಸಮಾಜದ ಸದಸ್ಯೆ ಎಂದು ಅರಿತಿದ್ದಾಳೆ. ಅಲ್ಲದೆ ನಗರ ಪ್ರದೇಶದ ವಿಧವೆಯರು ಪತಿಯ ಮರಣದ ನಂತರ ಮಾಂಗಲ್ಯ, ಕುಂಕುಮ, ಬಳೆ, ಹೂಗಳನ್ನು ಹಾಕಿಕೊಳ್ಳುತ್ತಿದ್ದಾರೆ. ಆದರೆ ಗ್ರಾಮೀಣ ಮಹಿಳೆಯರಿಗೆ ಕಾನೂನಿನ ಬಗ್ಗೆ ಮತ್ತು ವಿಧವೆಯರಿಗಾಗಿ ಜಾರಿಗೆ ತಂದ ಕಾಯ್ದೆಗಳ ಬಗ್ಗೆ ಅರಿವನ್ನು ಮೂಡಿಸಬೇಕಾಗಿದೆ. ಅವರಿಗೆ ಶಿಕ್ಷಣದ ಸೌಲಭ್ಯವನ್ನು ಒದಗಿಸಿಕೊಡಬೇಕು. ಅನೇಕ ಸಂಘ-ಸಂಸ್ಥೆಗಳನ್ನು ಸ್ಥಾಪಿಸಬೇಕಾಗಿದೆ. ಅಲ್ಲದೆ ವಿಧವೆಯರಿಗಾಗಿ ಅನೇಕ ಹೋರಾಟಗಳನ್ನು ಮಾಡಬೇಕಾಗಿದೆ. ಅಂದಾಗ ಮಾತ್ರ ಗ್ರಾಮೀಣ ಪ್ರದೇಶದ ವಿಧವೆಯರು ಸುಧಾರಿಸಿ ತಮ್ಮ ಹಕ್ಕುಗಳನ್ನು ಪಡೆಯಲು ಅನುಕೂಲವಾಗುವುದು ಎಂದಿದ್ದಾರೆ. ಒಟ್ಟಾರೆಯಾಗಿ ವಿಧವೆಯೂ ಪ್ರಾಚೀನ ಕಾಲದ ಹಾಗೆ ನೋವನ್ನು ಅನುಭವಿಸದೆ ಒಂದು ರೀತಿಯ ಉತ್ತಮ ಜೀವನವನ್ನು ನಡೆಸುತ್ತಿದ್ದಾಳೆ. ಆದರೆ ಗ್ರಾಮೀಣ ಪ್ರದೇಶದ ಮಹಿಳೆಯರು ಸ್ವಲ್ಪಮಟ್ಟಿಗೆ ಸುಧಾರಿಸಬೇಕಾಗಿದೆ ಎಂದು ಹೇಳಿದ್ದಾರೆ.

ವೇದಗಳ ಕಾಲದಿಂದಲೂ ಇಂದಿನ ಇಪ್ಪತ್ತೊಂದನೆಯ ಶತಮಾನದವರೆಗಿನ ವೈಧವ್ಯದ ಸ್ಥಿತಿಗತಿಗಳನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ವೇದಗಳ ಪೂರ್ವಕಾಲದಲ್ಲಿ ವಿಧವೆ ಎನ್ನುವ ಪರಿಕಲ್ಪನೆಯೆ ಇರಲಿಲ್ಲ. ಅವಳು ಸಹ ಸಾಮಾನ್ಯ ಮಹಿಳೆಯ ಹಾಗೆ ಎಲ್ಲಕ್ಷೇತ್ರಗಳಲ್ಲಿ ಭಾಗವಹಿಸುತ್ತಿದ್ದಳು. ಅಲ್ಲದೆ ಪುರುಷರ ಮತ್ತು ಮಹಿಳೆಯರ ಮಧ್ಯೆ ತಾರತಮ್ಯವಿರಲಿಲ್ಲ. ಆದೂದರಿಂದಲೇ ಪುರುಷನು ಸ್ತ್ರೀಯ ಮೇಲೆ ಅಧಿಕಾರವನ್ನು ಚಲಾಯಿಸುತ್ತಿರಲಿಲ್ಲ. ಆಗಿನ ಮಹಿಳೆಯರು ಪತಿಯೇ ಪರದೈವವೆಂದೂ ತಿಳಿದರೂ ಸಹ ಅವರು ಸಂಪೂರ್ಣವಾಗಿ ಪತಿಯ ಮೇಲೆ ಅವಲಂಬಿತರಾಗಿರಲಿಲ್ಲ. ಅವರು ಸ್ವತಂತ್ರವಾಗಿ ಬದುಕುವ ಧೈರ್ಯವುಳ್ಳವಾರಾಗಿದ್ದರು. ಅಲ್ಲದೆ ತಂದೆಯ ಆಸ್ತಿಯಲ್ಲಿಯೂ ಸಹ ಪಾಲನ್ನು ಪಡೆದವರಾಗಿದ್ದರು. ಆದರೆ ಕಾಲಕಳೆದಂತೆ ಮಹಿಳೆಯ ಸ್ಥಿತಿಯು ಬಹಳ ಹೀನಾಯವಾಗ ತೊಡಗಿತು. ಅದರಲ್ಲೂ ವಿಧವೆಯಾಗಿ ಬಾಳುವುದು ತುಂಬಾಕಷ್ಟಕರವಾಯಿತು.

ಧರ್ಮದ ಮೂಲಕ ಮಹಿಳೆಯರಲ್ಲಿ ಪತಿಯೇ ಪರದೈವ, ಆತನಿಲ್ಲದೆ ಜೀವನ ಅಪೂರ್ಣ, ಮುತ್ತೈದೆ ಸಾವಿನಿಂದ ಸ್ವರ್ಗಪ್ರಾಪ್ತಿಯಾಗುತ್ತದೆ ಎನ್ನುವ ಕಲ್ಪನೆಯನ್ನು ಮೂಡಿಸಿ ಅವಳಿಗೆ ಪುರೋಹಿತವರ್ಗವು ಸತಿ ಹೋಗುವಂತೆ ಮಾಡಿದರು. ಇದರಿಂದ ಅನೇಕ ಮಹಿಳೆಯರು ಸತಿಹೋಗಲು ಪ್ರಾರಂಭಿಸಿದರು. ಅದರಲ್ಲೂ ಮಧ್ಯಯುಗದಲ್ಲಿ ದಾಳಿಕಾರರ ಭಯದಿಂದ ವಿಧವೆಯಾಗಿ ಉಳಿದರೆ ಎಲ್ಲಿ ದಾಳಿಕಾರರು ತಮ್ಮ ಶೀಲವನ್ನು ಕಳೆಯುವರು ಎನ್ನುವ ಭಯದಿಂದಲೂ ಸಹ ವಿಧವೆಯಾಗಿ ಉಳಿಯದೆ ಸತಿಹೋಗಲು ಪ್ರಾರಂಭಿಸಿದರು. ಅಲ್ಲದೆ ವಿಧವೆಯಾದ ಮೇಲೆ ಪತಿ ಇದ್ದಾಗ ದೊರೆತ ಸ್ವಾತಂತ್ರ್ಯ ಅವಳಿಗೆ ಗಂಡನ ಮನೆಯಲ್ಲಿ ದೊರೆಯುವುದಿಲ್ಲ. ಆರ್ಥಿಕವಾಗಿ, ಮಾನಸಿಕವಾಗಿ ನೋವನ್ನು ಅನುಭವಿಸುವುದರ ಜೊತೆಗೆ ಮನೆಯವರ ಮೇಲೆ ಅವಲಂಬಿತವಾಗಿ ಬದುಕಬೇಕಾಗುವುದು. ಹೆಣ್ಣು ಅಬಲೆ ಎನ್ನುವ ಕಾರಣಕ್ಕೆ ಮತ್ತು ಗಂಡನ ಆಶ್ರಯ ಇಲ್ಲದ ಕಾರಣ ಅವಳು ಮನೆಯವರಿಂದ ಅನೇಕ ರೀತಿಯ ಹಿಂಸೆಗಳಿಗೆ ಗುರಿಯಾಗುತ್ತಾಳೆ. ವಿಧವೆಯಾಗಿರುವುದರಿಂದ ಅವಳನ್ನು ಅಮಂಗಲೆ, ಅಪಶಕುನ ಎಂದು ಭಾವಿಸುವರು, ಅವಳನ್ನು ಯಾವುದೇ ಶುಭಕಾರ್ಯದಲ್ಲಿ ಭಾಗವಹಿಸಲು ಅನುಕೂಲ ಮಾಡಿಕೊಡುವುದಿಲ್ಲ. ಅವಳಿಗೂ ಜೀವನವಿದೆಯೆಂದು ಯಾರು ಅರ್ಥಮಾಡಿಕೊಳ್ಳುವುದಿಲ್ಲ. ಅಲ್ಲದೆ ಇನ್ನು ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾದವರಂತು ಜೀವನ ಪರ್ಯಂತ ನೋವನ್ನು ಅನುಭವಿಸಬೇಕಾಗುವುದು. ಅವಳು ಪತಿಗೆ ನಿಷ್ಠೆಯಿಂದ ಇರಬೇಕು. ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಬೇಕು ಎನ್ನುವ ದೃಷ್ಟಿಯಿಂದ ವಿಧವೆಯಾದ ಮೇಲೆ ಅವಳಿಗೆ ವಿಕಾರ ರೂಪವನ್ನು ತಾಳುವಂತೆ ಒತ್ತಾಯಿಸಿದರು. ಕುಂಕುಮ ತೆಗೆಯುವುದು,

ಹೂಮುಡಿಯದೆ ಇರುವುದು, ಕೇಶಮುಂಡನ ಮಾಡಿಸಿಕೊಳ್ಳುವುದು, ಬಿಳಿವಸ್ತ್ರಧರಿಸುವುದು, ಒಪ್ಪತ್ತು ಊಟಮಾಡುವುದು ಈ ರೀತಿಯ ಆಚರಣೆಗಳನ್ನು ಜಾರಿಗೆ ತಂದರು, ಕಾರಣ ವಿಧವೆಯಾದವಳು ಇವೆಲ್ಲವನ್ನು ಧರಿಸುವುದರಿಂದ ಬೇರೆ ಪುರುಷನಿಗೆ ಆಕರ್ಷಕವಾಗಿ ಕಾಣುವಳು ಎಂದು. ಒಪ್ಪತ್ತು ಊಟಮಾಡವುದರಿಂದ ತನ್ನ ಕಾಮವನ್ನು ನಿಗ್ರಹಿಸಿಕೊಳ್ಳುವಳು, ಪರಪುರುಷರ ಮೇಲೆ ಅವಳೀಗೆ ಆಸೆ ಮೂಡುವುದಿಲ್ಲ ಎನ್ನುವ ಕಾರಣಕ್ಕಾಗಿ, ಅಲ್ಲದೆ ಒಪ್ಪತ್ತಿನ ಊಟವನ್ನು ಸಹ ತಿನ್ನಬೇಕಾದರೂ ಅದು ಹಂಗಿನ ಊಟವೇ ಆಗಿತ್ತು. ಈ ರೀತಿ ವಿಧವೆಯಾಗಿರುವುದರಿಂದ ಕಷ್ಟಗಳನ್ನು ಅನುಭವಿಸುವುದು ತುಂಬಾ ಕಷ್ಟಕರವಾಗಿತ್ತು. ವಿಧವೆಯ ಬಾಳು ಜೀವಂತವಿದ್ದು ಸತ್ತ ಹಾಗೆ ಇತ್ತು ಆದುದರಿಂದ ಸತಿ ಹೋಗಲು ಪ್ರಾರಂಬಿಸಿದರು.

ರಾಜಾರಾಮ ಮೋಹನರಾಯರು ಸತಿಪದ್ಧತಿಯನ್ನು ಹೋಗಲಾಡಿಸಬೇಕೆಂದು ಹೋರಾಡಿ ೧೮೨೯ರಲ್ಲಿ ಈ ಸತಿಪದ್ಧತಿಯ ವಿರುದ್ಧ ಕಾಯ್ದೆಯನ್ನು ಜಾರಿಗೆ ತಂದರು. ಈ ಕಾಯ್ದೆಯೂ ಜಾರಿಗೆ ತಂದನಂತರ ಕೂಡಲೇ ಈ ಪದ್ಧತಿಯು ಹೋಗಲಿಲ್ಲ. ಕಾಲಕ್ರಮೇಣ ಈ ಪದ್ಧತಿಯು ನಶಿಸಿದೆ. ಆದರೆ ಇಪ್ಪತ್ತೊಂದನೆ ಶತಮಾನದಲ್ಲೂ ಸಹ ಒಂದೆರಡು ಸತಿ ಪ್ರಕರಣಗಳು ನಡೆದಿವೆ. ಮಧ್ಯ ಪ್ರದೇಶದ ಪನ್ನಾಜಿಲ್ಲೆಯ ತಮೋಲಿ ಗ್ರಾಮದಲ್ಲಿ ಅರವತ್ತರ ವೃದ್ಧೆ ಕುಟ್ಟುಬಾಯಿ ಅಗಸ್ಟ್ ೨೦೦೨ರಂದು ಸತಿಹೋದಳು, ಇದಕ್ಕಿಂತ ಮೊದಲು ಹದಿನೈದು ವರ್ಷಗಳ ಹಿಂದೆ ರಾಜಸ್ಥಾನದ ರೂಪಕನ್ವರಳು ಸತಿ ಹೋಗಿದ್ದಳು, ಆದರೆ ಮೊದಲಿನ ಹಾಗೆ ಪ್ರತಿಯೊಬ್ಬರು ಸತಿ ಹೋಗುತ್ತಿಲ್ಲ. ಆದರೆ ವಿಧವೆಯಾಗಿ ಒಂಟಿ ಜೀವನ ನಡೆಸುವುದು ತುಂಬಾ ಕಷ್ಟಕರವಾಗಿತ್ತು. ಅವಳಿಗೆ ಆರ್ಥಿಕ ಸ್ಥಿತಿಯು ಅಭದ್ರತೆಯಿಂದ ಕೂಡಿತ್ತು. ಅಲ್ಲದೆ ಅವಳು ಒಂಟಿಯಾಗಿ ಜೀವನದುದ್ದಕ್ಕೂ ಕಾಲಕಳೆಯ ಬೇಕಾಯಿತು. ಅವಳಿಗೆ ಒಂದು ಭದ್ರವಾದ ನೆಲೆಯನ್ನು ಒದಗಿಸಿಕೊಡಲು ಈಶ್ವರಚಂದ್ರ ವಿದ್ಯಾಸಾಗರರು ವಿಧವಾ ವಿವಾಹದ ಬಗ್ಗೆ ೧೮೫೬ರಲ್ಲಿ ಕಾನೂನನ್ನು ಜಾರಿಗೆ ತಂದರು. ಅಲ್ಲದೆ ಜ್ಯೋತಿಬಾ ಫುಲೆಯವರು ವಿಧವೆಯರಿಗೆ ಕೇಶಮುಂಡನ ಮಾಡಿಸುವುದು ಉತ್ತಮವಲ್ಲ ಎಂದು ವಿಧವೆಯರಿಗೆ ಅನ್ಯಾಯದಿಂದ ಗರ್ಭಧರಿಸಿದರೆ ಅವರಿಗೆ ಆಶ್ರಯವನ್ನು ಕೊಡಲು ಒಂದು ಅನಾಥಾಶ್ರಮವನ್ನು ಸ್ಥಾಪಿಸಿದರು. ದಯಾನಂದ ಸರಸ್ವತಿಯವರು ಸಹ ವಿಧವಾಶ್ರಮವನ್ನು ಸ್ಥಾಪಿಸಿದರು. ಗಾಂಧಿಜೀಯವರು ವಿಧವೆಯರನ್ನು ನಾಲ್ಕು ಗೋಡೆಗಳ ಮಧ್ಯ ಇರದೇ ಅವಳು ಸಮಾಜದ ಸದಸ್ಯಳು ಎಂದು ತಿಳಿಯಲು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗುವಂತೆ ಪ್ರೇರೇಪಿಸಿದರು. ಈ ರೀತಿಯಾಗಿ ಸಮಾಜ ಸುಧಾರಕರ ಪ್ರಯತ್ನದಿಂದ ವಿಧವೆಯರ ಸ್ಥಿತಿ ಉತ್ತಮವಾಗಿದೆ. ಅಲ್ಲದೆ ವಿಧವೆಗೆ ಆಸ್ತಿಹಕ್ಕನ್ನು, ದತ್ತು ಪಡೆಯುವ ಹಕ್ಕನ್ನು, ವಿಧವಾ ಪುನರ್ವಿವಾಹದ ಹಕ್ಕನ್ನು ಜಾರಿಗೆ ಬಂದಿವೆ. ಇಷ್ಟೆಲ್ಲ ಕಾನೂನುಗಳು ಬಂದರು ಅವು ಸಮಾಜದಲ್ಲಿ ರೂಢಿಗೆ ಬಂದಿರಲಿಲ್ಲ. ಕಾರಣ

ಸಮಾಜದಲ್ಲಿ ವಿಧವೆಯರನ್ನು ಅತಿ ಕೀಳುದೃಷ್ಟಿಯಿಂದ ಕಾಣುತ್ತಿದ್ದರು. ಆದರೆ ಇತ್ತೀಚೆಗೆ ವಿಧವೆಯರು ಅದರಲ್ಲೂ ಉನ್ನತ ವರ್ಗಜಾತಿಯ ಮಹಿಳೆಯರು ಮರುವಿವಾಹವಾಗುತ್ತಿದ್ದಾರೆ. ಕೆಳ ಜಾತಿಗಳಲ್ಲಿ ಮೊದಲಿನಿಂದಲೂ ವಿಧವಾ ಮರುವಿವಾಹ ಪದ್ಧತಿ ಇದೆ. ಆದರೆ ಮೇಲುಜಾತಿಗಳಲ್ಲಿ ತುಂಬಾ ಕಷ್ಟಕರವಾಗಿತ್ತು. ಇಚ್ತೀಚೆಗೆ ವಿಧವೆಯರು ಮರುವಿವಾಹವಾಗುತ್ತಿದ್ದಾರೆ. ಪತಿಯ ಮರಣದ ನಂತರ ಆತನ ಆಸ್ತಿಗೆ ಹಕ್ಕುದಾರಳಾಗುತ್ತಿದ್ದಾಳೆ. ಅಲ್ಲದೆ ವಿಧವೆಯಾದವಳು ಮಗುವನ್ನು ದತ್ತು ತೆಗೆದುಕೊಳ್ಳುವ ಅಧಿಕಾರವನ್ನು ಹೊಂದಿದ್ದಾಳೆ.

ಈ ಎಲ್ಲ ಹಕ್ಕುಗಳ ಜೊತೆಗೆ ಅನೇಕ ಸಂಘಸಂಸ್ಥೆಗಳು ಸಹ ವಿಧವೆಯರ ಸಮಸ್ಯೆಗಳನ್ನು ಕುರಿತು ಕೆಲಸ ಮಾಡುತ್ತಿವೆ, ಅನೇಕ ಹೋರಾಟಗಳು ನಡೆದಿದೆ. ಇನ್ನು ಮುಂದೆಯಾದರು ವಿಧವೆಯ ಸಮಸ್ಯೆಗಳನ್ನು ಕುರಿತು ಅನೇಕ ಸಂಘಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಮುಂದಿನ ಕೆಲವು ವರ್ಷಗಳಲ್ಲಿ ವಿಧವೆ ಎನ್ನುವ ಶಬ್ದವೇ ಹೋರಟು ಹೋಗಬಹುದು ಎನ್ನಿಸುತ್ತದೆ. ಇಂದಿನ ವಿಧವೆಯರು ಮರು ವಿವಾಹವಾಗಲು, ಆಸ್ತಿಹಕ್ಕು ಪಡೆಯಲು ಮುಖ್ಯಕಾರಣ ಶಿಕ್ಷಣ ಮಹಿಳೆಯು ಶಿಕ್ಷಣ ಪಡೆಯುವುದರಿಂದ ಅವಳು ಸ್ವಾವಲಂಬಿಯಾಗಿ ಬದುಕಬಲ್ಲೆ ಎನ್ನುವ ಧೈರ್ಯ ಬರುವುದು. ಇಂದಿನ ವಿದ್ಯಾವಂತ ಮಹಿಳೇಯು ಪತಿಯ ಮರಣದ ನಂತರವೂ ಕುಂಕುಮ, ಕಾಲುಂಗುರ, ಹೂ, ಬಳೆ, ಮಾಂಗಲ್ಯವನ್ನು ಧರಿಸುತ್ತಿದ್ದಾರೆ. ಎಲ್ಲ ಧಾರ್ಮಿಕ ಕಾರ್ಯಗಳಲ್ಲಿಯೂ ಸಹ ವಿಧವೆಯಾದವಳು ಭಾಗವಹಿಸುತ್ತಿದ್ದಾಳೆ. ಆದರೆ ನಗರ ಪ್ರದೇಶದ ವಿಧವೆಯರು ಪಡೆದಂತಹ ಸೌಲತ್ತುಗಳನ್ನು ಗ್ರಾಮೀಣ ಪ್ರದೇಶದ ಮಹಿಳೆಯು ತುಂಬಾ ಕಡಿಮೆ ಪ್ರಮಾಣದಲ್ಲಿ ಪಡೆಯುತ್ತಿದ್ದಾಳೆ. ಕಾರಣ ಅವಳಿಗೆ ಶಿಕ್ಷಣ ದೊರೆಯುತ್ತಿಲ್ಲ ಅಲ್ಲದೆ ಅವಳಿಗೆ ಕಾನೂನಿನ ಬಗ್ಗೆ ಅರಿವಿಲ. ಆದರೂ ಸಹ ಗ್ರಾಮೀಣ ಪ್ರದೇಶದಲ್ಲಿ ಸಾಂಪ್ರದಾಯಿಕ ಕುಟುಂಬಗಳಿದ್ದರೂ ಸಹ ಇಂದಿನ ವಿಧವೆಯು ಮೊದಲಿನ ಹಾಗೆ ಅಷ್ಟೊಂದು ಕಷ್ಟವನ್ನು ಅನುಭವಿಸದೆ ಉತ್ತಮ ರೀತಿಯಿಂದ ಜೀವನವನ್ನು ನಡೆಸುತ್ತಿದ್ದಾಳೆ. ಗ್ರಾಮೀಣ ಪ್ರದೇಶದ ಮಹಿಳೆಗೆ ಸಂಘಸಂಸ್ಥೆಗಳು ಅವಳಿಗೆ ನೀಡಿದ ಹಕ್ಕುಗಳ ಬಗ್ಗೆ ಅರಿವನ್ನು ಮೂಡಿಸಬೇಕಾಗಿದೆ.

ಇದುವರೆಗೂ ವಿಧವೆಯಾದವಳು ಅನೇಕ ರೀತಿಯ ನೋವನ್ನು ಅನುಭವಿಸುತ್ತಿದ್ದಾಳೆ. ಉದಾ : ಕಾಶಿ ಮತ್ತು ವಾರಣಾಸಿಯಲ್ಲಿಯ ವಿಧವೆಯರು ಅನೇಕ ಬಗೆಯ ನೋವನ್ನು ಅನುಭವಿಸುತ್ತಿದ್ದಾರೆ. ಇವರ ನೋವನ್ನು ಹೋಗಲಾಡಿಸಲು ವಿಧವೆಯರ ಸಮಸ್ಯೆಗಳ ಕುರಿತು ಚಳುವಳಿಗಳು ನಡೆಯಬೇಕಾಗಿದೆ. ಅನೇಕ ಸಂಘಸಂಸ್ಥೆಗಳ ಪಾತ್ರವು ಅತಿ ಮುಖ್ಯವಾಗಿದೆ. ಅವುಗಳು ಮಹಿಳೆಯರಿಗೆ ಸಮಸ್ಯೆಗಳ ಅರಿವನ್ನು ಮೂಡಿಸಿ ಅವರ ಸಮಸ್ಯೆಗೆ ಪರಿಹಾರವನ್ನು ನೀಡಿದರೆ ಮಾತ್ರ ವಿಧವೆಯರ ಸಮಸ್ಯೆ ಸ್ವಲ್ಪಮಟ್ಟಿಗಾದರೂ ಬಗೆಹರಿದು ಅವಳು ಎಲ್ಲಾಕಾರ್ಯಗಳಲ್ಲಿ ಭಾಗವಹಿಸುವಂತಾಗುವಳು ಮತ್ತು ಅವಳು ಸಮಾಜದ ಒಬ್ಬ ಸದಸ್ಯೆಯೆಂದು ಸಮಾಜವು ಅವಳನ್ನು ಕೀಳಾಗಿ ಕಾಣುವುದಿಲ್ಲ ಎನ್ನುವ ನಿರೀಕ್ಷೆಯಿದೆ.

# ಆಧಾರ ಗ್ರಂಥಗಳು

೧. ಮಹೇಶ್ವರಪ್ಪ(ಅನು), **ಭಾರತದಲ್ಲಿ ವಿವಾಹ ಮತ್ತು ಕುಟುಂಬ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೮

೨. ಸದಾಶಿವಯ್ಯ ಎಚ್.ಎಂ., **ಸಮಾಜಶಾಸ್ತ್ರ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯

೩. ಮುಳಗುಂದ ಚ.ವಿ.(ಸಂ), **ಮಾತೋಶ್ರೀ, ಶ್ರೀಮತಿ ಗಂಗಮ್ಮ ವೀರಪ್ಪ ಚಿನಿವಾರ ಅವರಿಗೆ ಸಮರ್ಪಿಸಿದ ಅಭಿನಂದನ ಗ್ರಂಥ**, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ, ೧೯೮೬

೪. ಅಂದನೂರು ಶೋಭ ಮತ್ತು ಶ್ರೀ ಲಕ್ಷ್ಮೀ ಬಿ.ಜಿ., **ಮಹಿಳೆಯರ ಮುನ್ನಡೆ**, ಮಾನಿನಿ ಪ್ರಕಾಶನ, ರಾಜಾಜಿನಗರ, ಬೆಂಗಳೂರು, ೧೯೮೮

೫. ನಾರಾಯಣ ಎಂ., **ಸಮಾಜಶಾಸ್ತ್ರ**, ಚೇತನ ಬುಕ್‌ಹೌಸ್, ಮೈಸೂರು, ೧೯೮೯

೬. ಶೇಠೆ ಬಿ.ಎಸ್., **ಕರ್ನಾಟಕದಲ್ಲಿ ಸತಿಪದ್ಧತಿ**, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೧

೭. ಸರಸ್ವತಿ ರಿಸಬೂಡ(ಅನು), **ಸ್ತ್ರೀ-ಪುರುಷ**, ಡಾ.ಛಾಯದಾತರ್(ಮೂಲ), ಇಳಾಪ್ರಕಾಶನ, ಚಾಮರಾಜ ಪೇಟೆ, ಬೆಂಗಳೂರು, ೧೯೯೨

೮. ಅನಂತರಾಮಯ್ಯ ಎಂ.(ಅನು), **ಭಾರತೀಯ ಸಮಾಜ**, ಶ್ಯಾಮಾಚರಣ ದುಬೆ(ಮೂಲ), ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ೧೯೯೪

೯. ವೀಣಾಸಂಕನಗೌಡರ, **ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪

೧೦. ರೋಹಿಣಿ ಬಿ.ಎಂ., **ಸ್ತ್ರೀ ಸಂವೇದನೆ**, ಹೇಮಾಂಶು ಪ್ರಕಾಶನ ದೇರೆಬೈಲು, ಮಂಗಳೂರು, ೧೯೯೫

೧೧. ವಾಗೀಶ್ವರಿಶಾಸ್ತ್ರೀ, **ಹಿಂದೂ ಸ್ತ್ರೀ ಚಿತೆಯಿಂದ ಚಿಂತೆಗೆ**, ವಾಗ್ದೇವಿ ಕಲಾನಿಕೇತನ, ಸಿ.ಟಿ.ರಸ್ತೆ, ತ್ಯಾಗರಾಜನಗರ, ೧೯೯೫

೧೨. ಭೈರಪ್ಪ ಕೆ., ಪ್ರಸ್ತುತ ಸಾಮಾಜಿಕ ಸಮಸ್ಯೆಗಳು, ಕೆಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು, ೧೯೯೬

೧೩. ಭೈರಪ್ಪ ಕೆ., ನಗರ ಸಮಾಜ, ಕೆಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು, ೧೯೯೮

೧೪. ಗಾಯತ್ರಿ ಎನ್. ಮಹಿಳಾ ಚಳುವಳಿಯ ಮಜಲುಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೮

೧೫. ಹೇಮಲತಾ ಮಹಿಷಿ, ಇಪ್ಪತ್ತೊಂದನೆಯ ಶತಮಾನದ ಮಹಿಳೆ, ಕಾನೂನು, ಸಮಾಜ ಮತ್ತು ಮಹಿಳೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯

೧೬. ಪೆರ್ಲ ಮಾ.ಚ, ಭಾರತೀಯ ವಿವಾಹ ಸಂಸ್ಕಾರ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು ದಕ್ಷಿಣ ಕನ್ನಡ, ೨೦೦೦

೧೭. ಗಂಗಾಧರ ದೈವಜ್ಞ, ಬುಡಕಟ್ಟು ಅಧ್ಯಯನ ಮಾಲೆ ೭, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೮. ಶೇಷನವರತ್ನ(ಅನು), ಮನುಸ್ಮೃತಿ, ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ, ೨೦೦೦

೧೯. ರೋಹಿಣಿ ಬಿ.ಎಂ., ಸ್ತ್ರೀ ಸಂಸ್ಕೃತಿ ಶಿಕ್ಷಣ, ಹೇಮಾಂಶು ಪ್ರಕಾಶನ, ಮಂಗಳೂರು, ೨೦೦೦

೨೦. ಶ್ರೀಮತಿ ಎಚ್.ಎಸ್. (ಅನು), ಆಧುನಿಕ ಭಾರತದಲ್ಲಿ ಮಹಿಳೆ, ಮೂಲ : ಜೆರಾಲ್ಡಿನ್ ಫೋರ್ಬ್ಸ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೧. ಗೀತಾ ಕೃಷ್ಣಮೂರ್ತಿ, ಮಹಿಳೆ, ಕಾನೂನು ಮತ್ತು ರಾಜಕಾರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೨. ಕೃಷ್ಣಪ್ಪ ಜಿ., ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ, ಶ್ರೀರಂಗ ಪ್ರಕಾಶನ, ಮೈಸೂರು, ೨೦೦೧

೨೩. ರಾಜಶೇಖರಯ್ಯ ಎಂ., ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ಧತಿ, ಅಭಿರುಚಿ ಪ್ರಕಾಶನ, ಕೆ.ಆರ್.ಸರ್ಕಲ್, ಮೈಸೂರು, ೨೦೦೨

೨೪. ಇಂದಿರಾ ಆರ್. ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೫. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೨

೨೬. ಭೈರಪ್ಪ ಕೆ., ಭಾರತೀಯ ಸಮಾಜ ಕೇಂಬ್ರಿಡ್ಜ ಪಬ್ಲಿಷಿಂಗ್ ಕಂಪನಿ, ಬೆಂಗಳೂರು

೨೭. ಮೂರ್ತಿಶ್ವರಯ್ಯ, ಮಹಿಳೆ ಸಮಾಜ ಮತ್ತು ಕಾನೂನು, ಸ್ವಪ್ನಬುಕ್ ಹೌಸ್, ತುಂಗಾ ಕಾಂಪ್ಲೆಕ್ಸ್, ಗಾಂಧೀನಗರ, ಬೆಂಗಳೂರು

೨೮. ಪ್ರಭು ಎಚ್.ಕೆ., ಹಿಂದೂ ಕಾನೂನು, ಅಕಳವಾಡಿ ಬುಕ್ ಡಿಪೋ, ವಿಜಯ ರೋಡ್, ಧಾರವಾಡ

೨೯. ಮಂಗಲಾಕಾಳೆ, ಸ್ತ್ರೀ ವಿಮೋಚನಾ ಹೋರಾಟಗಳು, ಅನಾರ್ಯ ಪ್ರಕಾಶನ, ಧಾರವಾಡ

ಲೇಖನಗಳು

೧. ಗುಲಬರ್ಗಾ ವಿಶ್ವವಿದ್ಯಾಲಯ, ಸಂಶೋಧನ ಪತ್ರಿಕೆ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ಡಿಸೆಂಬರ್, ೧೯೮೮

೨. ಕರ್ಮವೀರ, ದೀಪಾವಳಿ ವಿಶೇಷಾಂಕ, ಅಕ್ಟೋಬರ್, ೧೯೯೪

೩. ಶ್ರೀಮತಿ ಎಚ್.ಎಸ್.(ಸಂ), ಮಹಿಳಾ ಅಧ್ಯಯನ, ದಕ್ಷಿಣಾಯನ ಸಂಚಿಕೆ ೨, ಸಂಪುಟ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೪. ಶ್ರೀಮತಿ ಎಚ್.ಎಸ್.(ಸಂ), ಮಹಿಳಾ ಅಧ್ಯಯನ, ವಿಶೇಷ ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೫. ಮಾನಸ ತಿಂಗಳ ಪತ್ರಿಕೆ, ನವೆಂಬರ್ ೨೦೦೦

೬. ಅಚಲ ತಿಂಗಳ ಪತ್ರಿಕೆ, ಆಗಸ್ಟ್ ೨೦೦೨

ದಿನಪತ್ರಿಕೆಗಳು

೧. ಸಂಯುಕ್ತ ಕರ್ನಾಟಕ, ಸಾಪ್ತಾಹಿಕ ಸೌರಭ, ೨೫.೦೪.೧೯೯೯

೨. ಪ್ರಜಾವಾಣಿ ಪತ್ರಿಕೆ, ೮.೦೮.೨೦೦೨

೩. ವಿಜಯ ಕರ್ನಾಟಕ ಪತ್ರಿಕೆ, ೨.೯.೨೦೦೨

## ವೈಧವ್ಯೆ - ಒಂದು ಸಾಮಾಜಿಕ ಅಧ್ಯಯನ

## ಪ್ರಶ್ನಾವಳಿ

(ಆಯಾ ವ್ಯಕ್ತಿಗಳಿಗೆ ಸಂದರ್ಶನದಲ್ಲಿ ಅನ್ವಯಿಸುವ ಪ್ರಶ್ನೆಗಳನ್ನು ಕೇಳಲಾಯಿತು)

೧. ಹೆಸರು

೨. ವಯಸ್ಸು

೩. ವಿದ್ಯಾರ್ಹತೆ

೪. ಜಾತಿ

೫. ಸ್ಥಳ

೬. ಉದ್ಯೋಗ

೭. ಕೌಟುಂಬಿಕ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಶಿಕ್ಷಣ | ಉದ್ಯೋಗ |
| --- | --- | --- | --- | --- |
| | | | | |

೮. ನಿಮಗೆ ಪುನರ್ವಿವಾಹವಾಗಲು ಇಷ್ಟವಿದೆಯೇ? ಹೌದು-ಇಲ್ಲ

೯. ಒಂದು ವೇಳೆ ಮರುವಿವಾಹವಾಗಲು ಇಷ್ಟವಿಲ್ಲ ಎನ್ನುವುದಕ್ಕೆ ಕಾರಣಕೊಡಿ?

೧೦. ನೀವು ಪುನರ್ವಿವಾಹವಾದ ಮೇಲೆ ನಿಮ್ಮ ಮೊದಲ ಪತಿಯ ಮಕ್ಕಳನ್ನು ಯಾರು ನೋಡಿಕೊಳ್ಳುತ್ತಿದ್ದಾರೆ?

ಅ. ನಿಮ್ಮ ತೌರುಮನೆಯವರೆ?

ಆ. ನಿಮ್ಮ ಮೊಲದ ಪತಿಯ ಮನೆಯವರೆ?

ಇ. ನಿಮ್ಮ ಸಧ್ಯದ ಪತಿಯೆ?

೧೧. ನೀವು ಮರುವಿವಾಹವಾಗುವ ಪತಿಗೆ ಮೊಲದನೆ ಹೆಂಡತಿಯ ಮಕ್ಕಳಿದ್ದರೆ ನೀವು ಅವರನ್ನು ನೋಡಿಕೊಳ್ಳುವಿರಾ?

೧೨. ನೀವು ಮರುವಿವಾಹವಾಗುವ ಪತಿಗೆ ಮೊದಲನೆ ಹೆಂಡತಿ ಇದ್ದಿದ್ದರೆ ನಿಮ್ಮ ಅಭಿಪ್ರಾಯವೇನು?

೧೩. ನೀವು ಮರುವಿವಾಹವಾಗದೆ ಹಾಗೆಯೇ ಉಳಿದಿರುವುದರಿಂದ ನಿಮಗೆ ಪತಿಯ ಆಸ್ತಿಯಲ್ಲಿ ಪಾಲು ದೊರೆತಿದೆಯೇ?

೧೪. ವಿಧವೆಯರಿಗಾಗಿ ಜಾರಿಗೆ ಬಂದ ಕಾನೂನುಗಳ ಬಗ್ಗೆ ಮಾಹಿತಿ ಇದೆಯೇ?

೧೫. ವಿಧವೆಯರ ಸಮಸ್ಯೆಗಳನ್ನು ಬಗೆಹರಿಸುವ ಸಂಘ-ಸಂಸ್ಥೆಗಳ ಉಪಯೋಗ ಪಡೆದಿರುವಿರಾ?

೧೬. ವೃದ್ಧಾಪ್ಯದಲ್ಲಿ ವಿಧವೆಯಾಗಿರುವ ನಿಮಗೆ ನಿಮ್ಮ ಮಕ್ಕಳು ನೋಡಿಕೊಳ್ಳುತ್ತ ಇದ್ದಾರೆಯೇ?

